# ಓಂ



# ನಮಃ ಶಿವಾಯ

ಲೇಖಕರು

ಶ್ರೀ. ಎನ್. ಕೆ. ಜೋಶಿ

II Shree Laxmi Venkatesh Prasanna II



" THIS BOOK IS PUBLISHED WITH THE FINANCIAL ASSISTNCE OF TIRUMAL TIRUPATI DEVASTHANAMS UNDER THEIR SCHEME. AID TO PUBLISH RELIGIOUS BOOK."

# ಜ್ಯೋತಿರ್ಲಿಂಗ

( ದ್ವಾದಶ ಜ್ಯೋತಿರ್ಲಿಂಗಗಳ ವಿಸ್ತೃತ ಪರಿಚಯ )

* * * *

ಲೇಖಕ ಮತ್ತು ಪ್ರಕಾಶಕರು :

ಎನ್. ಕೆ. ಜೋಶಿ. ( ಗಲಗಲಿ )

* * * * *

ಆನಂದ ಸ್ಮರಣ ಪ್ರಕಾಶನ

" ಕೇಶವಾಲಯಂ "

ಪ್ರಜ್ವಲ ಮಿನಿ ಅಪಾರ್ಟಮೆಂಟ,

ಹಾವನೂರ ಬಡಾವಣೆ,

ಹೆಸರಘಟ್ಟಾ ರೋಡ,

ಬೆಂಗಳೂರು–೫೬೦೦೭೩.

# " JOTIRLING "

( Detailed discruption of Twelve Jotirlingas )

ಜ್ಯೋತಿರ್ಲಿಂಗ ( ದ್ವಾದಶ ಜ್ಯೋತಿರ್ಲಿಂಗಗಳ ವಿಸ್ತೃತ ಪರಿಚಯ )



First Adition, ( 1000 Copies )

1999 December

Pages 112+16+14 ( Photos )

Author : N. K. JOSHI. ( Galgali )

Publisher : N. K. JOSHI
ANAND SMARANA PRAKASHANA
" Kashavalaya "
Prajwal Mini Apartment.
Havanur Extention.
Hesarghatta Road,
Bangalore-560073
Phone No— 8370936

Price: Rs/ 30 00

Printed by : S. T. Tadkod
Rajashree Printing Press
Tadkod Oni,
DHARWAD-580001

# ಪರಿವಿಡಿ



ಶ್ರೀ

# ಅ ಭಿ ಷೇ ಕ

ಹನ್ನೆರಡು ಜ್ಯೋತಿಮಯ ಶಿವಲಿಂಗ ಕಥನವನು
ಕನ್ನಡದ ಭಾಷೆಯಲಿ ಒಂದೆಡೆಗೆ ಕೂಡಿಸುತ
ಭಿನ್ನಭಿನ್ನದ ಕಥೆ ಪುರಾಣಗಳಿಂದಾಯ್ದು ಸಾರ ಸಾಧನದಿಂದಲಿ
ಹೊನ್ನ ಕುಂಭವ ತುಂಬಿ ಜಾನ್ಹವಿಯ ಜಲದಿಂದ
ನನ್ನೆರಡು ಕರಗಳನು ಜೋಡಿಸುತ ಭಕ್ತಿಯಲಿ
ನನ್ನಿಯಿಂದಲಿ ನುತಿಸಿ ಅಭಿಷೇಕ ಗೈಯ್ಯುವೆನು ಸದಾ ಶಿವಲಿಂಗಗಳಿಗೆ॥



# ಹಿತನುಡಿ

ಶ್ರೀ ಎಸ್. ಕೆ. ಜೋಶಿಯವರು ಈಗಾಗಲೇ ಹಲವು ಗ್ರಂಥಗಳನ್ನು ಬರೆದಿದ್ದಾರೆ. ಅದರಲ್ಲೂ ಪುಣ್ಯಕ್ಷೇತ್ರಗಳ ದರ್ಶನ ಮಾಡಿಸುವಲ್ಲಿ ಅವರಿಗೆ ಎಲ್ಲಿಲ್ಲದ ಉತ್ಸಾಹ, ಅದರೊಂದಿಗೆ ಭಕ್ತಿ. ಅವರೇ ಈಗ ನಮ್ಮನ್ನೆಲ್ಲ ದ್ವಾದಶ ಜ್ಯೋತಿರ್ಲಿಂಗಗಳನ್ನು ದರ್ಶನ ಮಾಡಿಸುವಲ್ಲಿ ಸನ್ನದ್ಧರಾಗಿದ್ದಾರೆ.

ಶ್ರೀ ಎಸ್. ಕೆ. ಜೋಶಿಯವರು ನಮ್ಮ ಬಳಗದಲ್ಲೆಲ್ಲ 'ನಾನಾ' ಎಂದೇ ಪ್ರಿಯರಾದವರು. ಅವರು ನನ್ನನ್ನು ಈ ಕೃತಿಗೆ 'ಮುನ್ನುಡಿ' ಬರೆಯ ಬೇಕೆಂದು ಕೇಳಿದಾಗ ತಬ್ಬಿಬ್ಬಾದೆ, ಅಚ್ಚರಿಯಾಯಿತು. ನಾನು ಆ ಕಾರ್ಯಕ್ಕೆ ಯೋಗ್ಯನೆ ? ಎಂದು ಪ್ರಶ್ನಿಸಿಕೊಂಡೆ. ಆ ಮಾತನ್ನೇ ಅವರಿಗೆ ಹೇಳಿದೆ. ಬೇಡವೆಂದೆ ! 'ನಾನಾ' ಕೇಳಲಿಲ್ಲ.

ಈ ಸಂದರ್ಭದಲ್ಲಿ 'ನಾನಾ' ಅವರಿಗೆ ಮತ್ತೊಂದು ಮಾತು ಹೇಳಿದೆ– "ನೋಡಿ, ಮುನ್ನುಡಿ ಬರೆಯಬೇಕಾದರೆ ನಾನೂ ಸಾಕಷ್ಟು ಗ್ರಂಥಗಳನ್ನು ರಚಿಸಿದ ಅನುಭವ ಇರಬೇಕು. ಯೋಗ್ಯತೆ ಬೇಕು ಎಂದು. ಅವಾವೂ ನನ್ನಲ್ಲಿ ಇಲ್ಲ, ದಯವಿಟ್ಟು ನನ್ನನ್ನು ಕ್ಷಮಿಸಿರಿ" ಎಂದಾಗ, 'ನಾನಾ' ಒಂದೇ ಮಾತು ಹೇಳಿದರು. ಗ್ರಂಥಗಳು ಪ್ರಕಟವಾಗಿರಲಿಕ್ಕಿಲ್ಲ, ಆದರೆ ನೀವು ಈ ವಿಷಯ-ದಲ್ಲಿ ಬರೆದ ಲೇಖನಗಳು ಕಡಿಮೆಯೆ ? ಎಂದು ಹೇಳಿದರು. ಈ ಮಾತು ನನ್ನನ್ನು ಮಣಿಸಿತು.

'ಜ್ಯೋತಿರ್ಲಿಂಗ' ಈ ಶಬ್ದವನ್ನು ನಾನು ಮೊದಲು ಕೇಳಿದ್ದು ನನ್ನ ತಂದೆಯವರ ಮುಖದಿಂದ. ಈಗಿನ ಹಾವೇರಿ ತಾಲೂಕ ರಾಣೇಬೆನ್ನೂರ ಬಳಿಯಿರುವ ಮೈಲಾರನ ಕ್ಷೇತ್ರ ದೇವರಗುಡ್ಡದ ಉದ್ಭವಲಿಂಗವೂ ಜ್ಯೋತಿರ್ಲಿಂಗ ಎಂದು. ತಂದೆ ಉಸಿರಿನ ನೆನಪಷ್ಟೆ ಅಲ್ಲ, ಮಳೆಗಾಲದ ಸಮಯದಲ್ಲಿ ಕಾರ್ಮೋಡದ ಹಿನ್ನೆಲೆಯಲ್ಲಿ, ಮೈಲಾರನ ಮಂದಿರದ ಶಿಖರದ ತುದಿಯಲ್ಲಿ ಜ್ಯೋತಿಯನ್ನು ಕಂಡಿದ್ದರಂತೆ ತಂದೆಯವರು. ಇದು ಅವರಿಗೆ

ದಿವ್ಯ ದರ್ಶನವಾಗಿರಬಹುದು. ವಯಸ್ಸು ಕಳೆದಂತೆ ದೇಶದಲ್ಲಿ ಜ್ಯೋತಿರ್ಲಿಂಗಗಳು ಕೆಲವೇ ಮಾತ್ರವೆಂದು ಓದಿನಿಂದ ತಿಳಿದಿದ್ದು. ಆದರೆ, ಭಕ್ತರಿಗೆ ಶಿವನು ಅವರಿಗೆ ಅಲ್ಲಲ್ಲಿ ಜ್ಯೋತಿರೂಪ ದರ್ಶನವನ್ನು ಏಕೆ ನೀಡಬಾರದು ?

ಆ ದ್ವಾದಶ ಲಿಂಗಗಳ ದರ್ಶನವನ್ನೇ 'ನಾನಾ' ಅವರು ನಮಗೆ ಮಾಡಿಸುತ್ತಾರೆ. ಎಂಥ ಪುಣ್ಯದ ಕೆಲಸವದು ! ಅವರು ಬರೆದ ಈ ಪುಸ್ತಕ ಕೇವಲ ಒಂದು ಪ್ರವಾಸಿ 'ಗೈಡ' ಅಲ್ಲ. ಕ್ಷೇತ್ರ ಪುರಾಣ, ಸ್ಥಳದ ಇತಿಹಾಸ, ಮಂದಿರದ ನಿರ್ಮಾಣ, ಮಂದಿರಗಳ ಅಂದ-ಚಂದ ಕಲಾಕೌಶಲ್ಯ ಇವುಗಳ ಬಗ್ಗೆಯೂ ವಿವರ ನೀಡಿದ್ದಾರೆ.

ಗದ್ಯದಲ್ಲಿರುವ ಸಿದ್ಧಹಸ್ತ ಪದ್ಯದಲ್ಲಿಯೂ ಇಳಿದು ಬಂದಿದೆ. ಅದು ಗ್ರಂಥದ ಮೆರಗನ್ನು ಇನ್ನೂ ಹೆಚ್ಚಿಸಿದೆ. ಹೀಗಾಗಿ ಪುಸ್ತಕವನ್ನು ಓದುವಾಗ ಓದುಗ ಆಯಾ ಕ್ಷೇತ್ರದ ಮಾನಸಿಕ ಯಾತ್ರೆಯಲ್ಲಿ ತೊಡಗಿರುತ್ತಾನೆ. ಇಲ್ಲಿ 'ನಾನಾ' ಅವರು ಬರೆದ ಮಾತುಗಳನ್ನು ಉದಹರಿಸಿದರೆ, ಓದಿಗೆ ಕುಂದು ಬಂದೀತೆಂದು ಅವರ ಒಂದು ಮಾತನ್ನು ಈ ನುಡಿಯಲ್ಲಿ ತೆಗೆದುಕೊಳ್ಳಲು ಪ್ರಯತ್ನಿಸಲಿಲ್ಲ.!

'ಶಿ' ಮತ್ತು 'ವ' ಎಂಬೆರಡು ಅಕ್ಷರಗಳು ಪರಬ್ರಹ್ಮಪರವಾಗಿವೆ. ಜ್ಯೋತಿರ್ಮಯ ಲಿಂಗವೆಂದರೆ, ಸಾಕ್ಷಾತ್ ಸನಾತನ ಬ್ರಹ್ಮನೇ ಎಂದಿದ್ದಾರೆ ಹಿರಿಯರು, ಜ್ಞಾನಿಗಳು. ಭರತಭೂಮಿಯ ತುಂಬ ಹರಡಿಕೊಂಡಿರುವ ದ್ವಾದಶ ಜ್ಯೋತಿರ್ಲಿಂಗಗಳಂತೂ ಆಸ್ತಿಕರ ಆಸ್ಥಾನಗಳಾಗಿವೆ. ಭಾವುಕ-ಭಕ್ತರ ಶ್ರದ್ಧಾ ಕೇಂದ್ರಗಳಾಗಿವೆ. ದ್ವಾದಶ ಜ್ಯೋತಿರ್ಲಿಂಗಗಳ ದರ್ಶನದ ಭಾಗ್ಯ ಸುಲಭದಲ್ಲಿ ಒದಗಿ ಬರುವದಲ್ಲ ! ಶಿವನ ಕೃಪೆಯಿದ್ದರೆ ಮಾತ್ರ ಸಾಧ್ಯ. ಆದರೆ, ಇವುಗಳ ದರ್ಶನ ಪಡೆದು ಬಂದ ಮಹನೀಯರು, ಆ ಭಾಗ್ಯದಿಂದ ವಂಚಿತರಾದವರಿಗೆ, ಅವುಗಳ ಕುರಿತು ಹೇಳಿದರೂ ಕಿಂಚಿತ್ ಪುಣ್ಯಪ್ರಾಪ್ತಿ-ಯಂತೆ ! ಅಂದ ಮೇಲೆ 'ನಾನಾ' ತಂದಿರುವ ಈ ಕೃತಿ ಎಂಥ ಕಾರ್ಯ ಮಾಡುತ್ತದೆ ಎಂಬುದನ್ನು ಓದುಗರೇ ಹೇಳಬೇಕು.

ಶ್ರೀ ಎನ್.ಕೆ.ಜೋಶಿ 'ನಾನಾ' ಅವರ ಮನೆತನವೇ ಪುಣ್ಯಕಾರ್ಯಗಳಿಗೆ ಹೆಸರಾದದ್ದು. ಗಾಲವ ಮುನಿಗಳ ಪುಣ್ಯಕ್ಷೇತ್ರ ಕೃಷ್ಣಾತೀರದ ಗಲಗಲಿಯ ನೆಲದಿಂದ ಶಾಲ್ಮಲೆಯ ತೀರದ ಧಾರವಾಡಕ್ಕೆ ಬಂದು ನೆಲೆಸಿದ್ದು ಸಜ್ಜನಿಕೆ ಸುಸಂಸ್ಕೃತಗಳ ಸಂಗಮ ಅದು. ಅವರ ತಂದೆ ಹೆಸರಾಂತ ಪಂಡಿತರು, ಜ್ಯೋತಿಷ್ಯ ವಿದ್ವಾಂಸರು. ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟ-ರಾಯರ ಸಂಪರ್ಕದಲ್ಲಿದ್ದವರು. ವರಕವಿ ದ. ರಾ. ಬೇಂದ್ರೆಯವರಿಗಂತೂ ಪಂ. ಕೇಶವಶರ್ಮಾ ಗಲಗಲಿಯವರೆಂದರೆ ಗುರುಸಮಾನ ಗೌರವ! ಇನ್ನು ನಮ್ಮ ಭೂತಪೂರ್ವ ಪ್ರಧಾನಮಂತ್ರಿ ಶ್ರೀ ಮುರಾರ್ಜಿ ದೇಸಾಯಿಯವರು ಕರ್ನಾಟಕದ ಈ ಭಾಗಕ್ಕೆ ಬಂದರಂತೂ ಕೇಶವಶರ್ಮರನ್ನು ಕಾಣದೇ ಇರುತ್ತಿರಲಿಲ್ಲ! ಅಂಥವರ ಪುತ್ರ 'ನಾನಾ'. ಇತ್ತೀಚೆಗಷ್ಟೇ ನಮ್ಮನ್ನಗಲಿದ ಸುಪ್ರಸಿದ್ಧ ಕಾದಂಬರಿಕಾರ ಸತ್ಯಕಾಮರಿಗೆ ಬಲುಪ್ರಿಯರಾದವರು. ಇವರು ಬಂಧುತ್ವದ ರೀತಿಯಲ್ಲಿ ನಡೆದುಕೊಂಡವರು. ಸಹೃದಯ, ಸಾಹಿತ್ಯಪ್ರೇಮ, ಸಾಹಿತ್ಯರಚನೆ, ಸುಸ್ನೇಹಗಳಿಗೆ ಮತ್ತೊಂದು ಹೆಸರು ಇವರು. ಸಂತೋಷ-ಕ್ಕಾಗಿ, ಸ್ವಸಮಾಧಾನಕ್ಕಾಗಿ, ಸದಾ ಸಾಹಿತ್ಯರಚನೆಯಲ್ಲಿ ತೊಡಗಿಕೊಂಡೇ ಇರುತ್ತಾರೆ. ಅವರ ಕವನಗಳೆಂದರೆ ಕಲ್ಲುಸಕ್ಕರೆ, ಗದ್ಯ ಕಬ್ಬಿನ ಜಲ್ಲೆ. ಅವುಗಳ ಸುವಿಚಾರವೆಂಬ ರಸಪೂರಿತವಾದಂಥವುಗಳು.

ಪ್ರಸ್ತುತ ಗ್ರಂಥ ಕೇವಲ ಓದಿ ಎತ್ತಿಡುವ ಹಾಳೆಗಳ ಕಟ್ಟಲ್ಲ! ಒಂದು ಪವಿತ್ರ ಗ್ರಂಥದ ಮೌಲ್ಯ ಇದಕ್ಕಿದೆ. ಇನ್ನು ಒಂದು ಮಹತ್ವದ ಅಂಶ-ವೆಂದರೆ ಇದು ಒಂದು ಸಾಹಿತ್ಯಿಕ ಗ್ರಂಥದ ರೂಪದಲ್ಲಿ ನಿರೂಪಣೆಯಾಗಿದೆ! ಕವಿಹೃದಯಿ ಜೋಶಿಯವರ ಬರವಣಿಗೆ ಸುಲಿದ ಬಾಳೆಯ ಹಣ್ಣಿನಂತಿಹುದು. ಶೈಲಿ ಸುರುಚಿಪೂರ್ಣ ಜೇನುಬೆರೆತ ಸವಿಹಾಲಿನಂತಿಹುದು. ಹೀಗಾಗಿ ಅವರು ಬರೆದಿರುವ ವಿವರಗಳೆಲ್ಲವೂ ಎಲ್ಲ ಮಗ್ಗಲುಗಳಿಂದಲೂ ಪರಿಪೂರ್ಣವಾಗಿವೆ. ದ್ವಾದಶ ಜ್ಯೋತಿರ್ಲಿಂಗಗಳ ಕುರಿತ ಶ್ಲೋಕಗಳಿಗೆ ಕನ್ನಡ ರೂಪಕೊಟ್ಟು ಕವಿತೆಯಾಗಿ ಅಲ್ಲಲ್ಲಿ ಬಳಸಿಕೊಂಡಿರುವದು ಸಮಗ್ರ ವಾಚಕವೃಂದಕ್ಕೆ ಈ ಗ್ರಂಥ ಹಿಡಿಸುವಲ್ಲಿ ಸಂದೇಹವಿಲ್ಲ. ಅಲ್ಲದೇ ಪ್ರತಿ ಜ್ಯೋತಿರ್ಲಿಂಗ ಕ್ಷೇತ್ರ

ಚಿತ್ರಗಳನ್ನು ಅಳವಡಿಸಿಕೊಂಡಿದ್ದು ಇದೊಂದು ಸಚಿತ್ರ ಗ್ರಂಥವಾಗಿದೆ. ಇದರೊಂದಿಗೆ ಆಯಾ ಕ್ಷೇತ್ರಗಳನ್ನು ತಲುಪುವ ಮಾರ್ಗದರ್ಶನವಿದೆ.

ನಿವೃತ್ತ ಜೀವನ ಸಾಗಿಸುತ್ತಿರುವ 'ನಾನಾ' ಸದ್ಯ ದ್ವಾದಶ ಜ್ಯೋತಿರ್ಲಿಂಗ ದರ್ಶನ ಮಾಡಿಸುತ್ತಾ ಲಿಂಗಕ್ಕೆ ಲಕ್ಷ ಲಕ್ಷ ಬಿಲ್ವಾರ್ಚನೆ ಮಾಡಿದ್ದಾರೆ. ಆ ದಿಶೆಯಲ್ಲಿ ನನ್ನದೂ ಒಂದು ಬಿಲ್ವದಳ "ಏಕಬಿಲ್ವಂ ಶಿವಾರ್ಪಣಂ" ಎನ್ನುವಂತೆ ನನ್ನ ಭಕ್ತಿಯ ಎಸಳನ್ನು ಅರ್ಪಿಸುತ್ತಿದ್ದೇನೆ. ಈ ಸಂದರ್ಭಕ್ಕಾಗಿ ನಾನಾಗೆ ನನ್ನ ಧನ್ಯವಾದ...ಆದರೂ ಲೆಕ್ಕಣಿಕೆಯನ್ನು ಕೆಳಗಿಡುತ್ತಿದ್ದಂತೆಯೇ ಈ ಬರಹಕ್ಕೆ ನಾನು ಅರ್ಹನೇ ಎಂಬ ಶಂಕೆ ನನ್ನ ಮನದಿಂದ ಮಾಯವಾಗಿದೆ...ಅಂತಹದರಲ್ಲೂ ನಾನಾ ಅವರು ಇಂತಹ ಹತ್ತೆಂಟು ಗ್ರಂಥಗಳನ್ನು ರಚಿಸಲಿ, ಪ್ರಕಟಿಸಲಿ, ಅದಕ್ಕೆ ಶಿವನ ಆಶೀರ್ವಾದ ಸಿಗಲಿ ಎಂದು ಹೇಳುತ್ತ ಲೆಕ್ಕಣಿಕೆಯನ್ನು ಕೆಳಗಿಡುತ್ತಿದ್ದೇನೆ...

**ಎನ್. ಸಿ. ದೇಸಾಯಿ.**

'ಬಾಳಕೃಷ್ಣ'
ಸಿಲ್ವರ ಟೌನ್
ಗೋಕುಲರೋಡ
ಹುಬ್ಬಳ್ಳಿ-೫೮೦೦೩೦

ಹುಬ್ಬಳ್ಳಿ
೨೫-೧೨-೧೯೯೯

॥ ಶ್ರೀ ಕೇಶವಾಯನಮಃ ॥

# ನನ್ನ ಮಾತು

ಪುರಾಣ, ಇತಿಹಾಸ ಹಾಗೂ ಸ್ವತಃ ಕ್ಷೇತ್ರ ಸಂದರ್ಶನದಿಂದ ಪಡೆದುಕೊಂಡ ಮಾಹಿತಿಗಳೇ ಈ ಹನ್ನೆರಡು ಜ್ಯೋತಿರ್ಲಿಂಗಗಳನ್ನು ಪರಿಚಯಿಸಲು ನನ್ನ ಬರಹಕ್ಕೆ ಪ್ರೋತ್ಸಾಹದ ಒತ್ತುಗಳು, ಹೀಗಾಗಿ; ಆ ಪುರಾಣಿಕರನ್ನೂ, ಇತಿಹಾಸಕಾರರನ್ನು ಮತ್ತು ಕ್ಷೇತ್ರ ಸಂದರ್ಶನದ ಸಮಯದಲ್ಲಿ ಉತ್ಸುಕತೆಯಿಂದ ಸ್ಥಳದ ಮಹಿಮೆಯನ್ನು, ಪೂರ್ವಾಪರ ಸಂದರ್ಭದ ಮಾಹಿತಿ ಮುಂತಾದ ಮೂಲ ಬೇರುಗಳನ್ನು ನೆನಪಿಸಿಕೊಟ್ಟ ಮಹಂತರನ್ನೂ, ಅರ್ಚಕರನ್ನೂ, ಸ್ಥಳಿಕ ವಯೋವೃದ್ಧರನ್ನೂ ಈ ಸಂದರ್ಭ ದಲ್ಲಿ ನೆನೆಯದಿದ್ದರೆ ಕೃತಘ್ನನಾಗಬೇಕಾದೀತು ! ಅವರೆಲ್ಲರಿಗೂ ನಮೋ ಎಂಬೆ.

ನನಗೆ ಮೊದಲಿನಿಂದಲೂ; ಎಲ್ಲಿಯೇ ಹೋಗಲಿ ಆ ಸ್ಥಳದಲ್ಲಿ ಏನಾದರೂ ವೈಶಿಷ್ಟ್ಯತೆ ಕಂಡು ಬಂದರೆ, ಅದರ ಮೂಲ ಹಿಡಿದು ಅಲ್ಲಾಡಿಸುವ ಕುತೂಹಲ. ನವಕರಿಯ ಅಲೆದಾಟದ ಜೀವನದಲ್ಲಿಯೂ ನನ್ನ ಕರ್ತವ್ಯದ ಜೊತೆಗೆ; ಸಂದರ್ಶಿಸಿದ ಹಳ್ಳಿಯಲ್ಲಾಗಲೀ, ಪಟ್ಟಣದಲ್ಲಾಗಲೀ ಕುತೂಹಲ ಕೆರಳಿಸುವ ಆಗು-ಹೋಗುಗಳಿದ್ದರೆ ಅವನ್ನು ಕೆದಕಿ-ಕೇಳಿ ತಿಳಿದು ಕೊಳ್ಳುವ ಹವ್ಯಾಸವೂ ಇತ್ತು. ಅದು ನನ್ನ ನಿವೃತ್ತಿಯ ಜೀವನದಲ್ಲಿ ಮತ್ತಷ್ಟು ಚಿಗುರುಕೊಂಡಿತು. ಹೀಗಾಗಿ; ಯಾವುದೇ ಕ್ಷೇತ್ರ ಸ್ಥಳವನ್ನಾಗಲಿ, ಐತಿಹಾಸಿಕ ಸ್ಥಳವನ್ನಾಗಲೀ, ಮನಸ್ಸಿಗೆ ಮುದವನ್ನೀಯುವ ಸೃಷ್ಟಿ ಸೊಬಗಿನ ತಾಣವನ್ನಾಗಲೀ ಸಂದರ್ಶಿಸಿದ ಸಮಯದಲ್ಲಿ ಆಯಾ ಸ್ಥಳಗಳ ಸ್ಥಳ ಪುರಾಣವನ್ನು ಹೆಕ್ಕಿ ತೆಗೆಯುವ ಉತ್ಸುಕತೆ ಹಣಿಕಿಕ್ಕಿ ಸಂಗ್ರಹಿಸಿ, ಹಿಗ್ಗಿಸಿ ಬರೆದಿಡುವ ಹವ್ಯಾಸವನ್ನು ಬೆಳೆಸಿಕೊಂಡು ಬಂದಿರುವೆ. ಅದೇ ಮನಸ್ಸಿನ ಜಾಡಿನಲ್ಲಿ ಈ ಹನ್ನೆರಡು ಜ್ಯೋತಿರ್ಲಿಂಗಗಳನ್ನು ಪರಿಚಯಿಸಿರುವೆ,

ಪುರಾಣ ಪ್ರಪಂಚದ, ಇತಿಹಾಸದ ಇತಿ-ಮಿತಿಗಳ ಪರಿಜ್ಞಾನ ಅಷ್ಟೊಂದು ಬಲವತ್ತರವಾದ ತಿಳುವಳಿಕೆ ನನ್ನಲ್ಲಿಲ್ಲವೆಂದು ಪ್ರಾಂಜಲ ಮನಸ್ಸಿನಿಂದ ಹೇಳಬಯಸುವೆ. ಆದ್ದರಿಂದ; ಓದುಗರು ನನ್ನಿಂದೇನಾದರೂ ತಪ್ಪು ತಡೆಗಳಾಗಿದ್ದಲ್ಲಿ ಅವುಗಳ ಬಗೆಗಿನ ಸೂಕ್ತ ಸಲಹೆಗಳನ್ನು ಸಂತೋಷ ದಿಂದ ಸ್ವೀಕರಿಸುವೆ.

ಈ ಕೃತಿಗೆ ಬೆಳಕು ಬೀರಲು, ತಿರುಪತಿಯ ಬೆಟ್ಟವೇರಲು ನನ್ನ ಮಿತ್ರ ಶಿವಪುತ್ರಪ್ಪ ತಡಕೋಡ ಹಾಗೂ ಅವರ ಪುತ್ರ ಬಿ, ವಿರೇಶ ಅವರುಗಳೇ ದಾರಿ ತೋರಿದರು. ಆ ದಾರಿಯೇ ನನಗೆ ರಹದಾರಿಯಾಯಿತು. ಹೀಗಾಗಿ ಅವರನ್ನು ವ್ಯಕ್ತಿಗತ ನೆನಪಿಸುವೆ.

ತಿರುಪತಿಯ ಶ್ರೀವೆಂಕಟರಮಣ ನಮ್ಮ ಮನೆತನದ ಕುಲದೇವರು. ಆತನು ನಮ್ಮನ್ನು ಇಲ್ಲಿಯವರೆಗೂ ಕೈಹಿಡಿದು ನಡೆಸಿಕೊಂಡು ಬಂದವ. ಈ ನನ್ನ ಧಾರ್ಮಿಕ ಕೃತಿಯು ಹೊರಬರಲು ಆತನ ಅನುಗ್ರಹವೆಂದು ಬೇರೆ ಹೇಳಬೇಕಿಲ್ಲ, ಸಾಮಾನ್ಯವಾಗಿ ಭಕ್ತರೆಲ್ಲ ತಿಮ್ಮಪ್ಪನ ಹುಂಡಿಗೇ ಹಾಕುವ ಪದ್ಧತಿ ಆದರೆ: ಆ ಶ್ರೀನಿವಾಸನ ಹುಂಡಿಯಿಂದಲೇ ನನ್ನಂಥ ಬಡ ಭಕ್ತನಿಗೆ ದೊರೆತದ್ದು ನನ್ನ ಪೂರ್ವ ಜನ್ಮದ ಪುಣ್ಯವೆಂದು ಭಾವಿಸುವೆ. ಈ ಪುಸ್ತಕದ ಪ್ರಕಟನೆಗೆ ಸಹಾಯ ಧನವಿತ್ತ ತಿರುಮಲ ತಿರುಪತಿ ದೇವಸ್ಥಾನದ ಗ್ರಂಥ ಪ್ರಕಾಶನದ ಸಂಪಾದಕ ಮಂಡಲಿಯನ್ನು ತುಂಬು ಹೃದಯದಿಂದ ಸ್ಮರಿಸುವೆ. ಶ್ರೀ ಶ್ರೀನಿವಾಸನಿಗೆ ಪೊಡಮಡುವೆ.

ನನ್ನ ಧಾರ್ಮಿಕ ಬರಹಗಳಿಗೆಲ್ಲ ಒಳ್ಳೇ ಬಿಚ್ಚು ಮನಸ್ಸಿನಿಂದ ಆಗಾಗ್ಗೆ ಉತ್ತೇಜನವೀಯುತ್ತ ಬಂದಿರುವ ಮಾನ್ಯ ಆದ್ಯರಾಮಾಚಾರ್ಯರನ್ನು ನೆನೆಯದಿರಲಾರೆ.

ಈ ಹನ್ನೆರಡು ಜ್ಯೋತಿರ್ಲಿಂಗಗಳ ಚರಿತ್ರ ಬರೆದಿಟ್ಟು ೩-೪ ವರುಷಗಳೇ ಸಂದವು. ಕರಡು ಪ್ರತಿಯನ್ನು ಅಣ್ಣ ವಿಠ್ಠಣ್ಣ (ದಿ. ಎಚ್. ಜಿ. ಜೋಶಿ) ತಿದ್ದಿಕೊಟ್ಟಿದ್ದರು. ಅವರು ಜೀವಿತವಿರುವಾಗಲೇ ಪ್ರಕಟಿಸಬೇಕೆಂಬ ಹಂಬಲವಿತ್ತು, ಶ್ರೀ ಶ್ರೀನಿವಾಸನ ಅನುಗ್ರಹಕ್ಕಾಗಿ ಕಾದಿತ್ತೇನೋ ? ಈ ಜ್ಯೋತಿರ್ಲಿಂಗಗಳಿಗೆ ಅಣ್ಣ ನಿರುವಾಗಲೇ ಬೆಳಕು ಬೀಳಲಿಲ್ಲವೆಂಬ ಕೊರಗು ಹಾಗೇ ಉಳಿಯಿತು. "ಕಾಲಾಯ ತಸ್ಮೈನ್ನಮಃ।" ಈಗ ಈ ಜ್ಯೋತಿರ್ಲಿಂಗ ಗಳಿಗೆ ಹಚ್ಚಿದ ನಂದಾದೀಪವನ್ನು ಆತನು ಮೇಲೆಯೇ ಕುಳಿತು ನೋಡಿ ಸಂತಸ ಪಡಲೆಂದು ಅಪೇಕ್ಷಿಸುವೆ. ಆತನ ಆತ್ಮಕ್ಕೆ ಚಿರಶಾಂತಿ ಸಿಗಲೆಂದು ಜ್ಯೋತಿರ್ಲಿಂಗಗಳಿಗೆ ಅಭಿಷೇಕ ಗೈದು ನಮಿಸಿ ಬೇಡುವೆ,

ಈ ಪುಸ್ತಕದ ಮುದ್ರಣದ ವೆಚ್ಚ ( ೧೦೦೦ ಪ್ರತಿಗಳಿಗೆ ) ಸುಮಾರು ೨೫ ಸಾವಿರಕ್ಕೂ ಮಿಕ್ಕಬಹುದೆಂದು ಅಂದಾಜು ಇಟ್ಟು ಕೊಂಡಿದ್ದೆ. ಶ್ರೀ ಶ್ರೀನಿವಾಸನಿಂದ ಅರ್ಧದಷ್ಟು ಸಹಾಯ ಧನ ದೊರಕುವುದೆಂದು ಆಶ್ವಾಸನೆ ಬಂದರೂ ಮುಂದಿನ ವೆಚ್ಚವನ್ನು ಹೇಗೆ ಸರಿ ದೂಗಿಸಬೇಕೆಂಬ ಹೊಯ್ದಾಟದಲ್ಲಿದ್ದೆ. ಆಗ: ನನ್ನ ಮಕ್ಕಳೂ, ಧಾರವಾಡ ಗೆಳೆಯ ಬಳಗವೂ ಮುನ್ನುಗ್ಗಲು ಪ್ರೋತ್ಸಾಹಿಸಿದರು, ಅವರೆಲ್ಲರೂ ಕೃತಜ್ಞತೆಗೆ ಪಾತ್ರರು.

ಚಿತ್ರಕಲಾ ಪ್ರಪಂಚದಲ್ಲಿ ತಮ್ಮದೇ ಆದ ಶೈಲಿಯಿಂದ ರತ್ನಗಂಬಳಿ ಯನ್ನು ನೆಯ್ದು ಕಲಾದೇವಿಗೆ ಹೊದಿಸಿದ ಕಲಾಕುಶಲರು ಶ್ರೀಮಾನ್ ಎನ್. ಸಿ. ದೇಸಾಯಿಯವರು. ಇತ್ತೀಚಿತ್ತಲಾಗಿ ಕರ್ನಾಟಕ ಸರಕಾರದ ಲಲಿತಕಲಾ ಅಕಾಡಮಿಯಿಂದ ಪ್ರಶಸ್ತಿ ದೊರೆತಿರುವುದೇ ಸಾಕ್ಷಿ. ಅವರು ಕೈಕುಂಚವನ್ನು ಎಷ್ಟೊಂದು ನವಿರಾಗಿ ಆಡಿಸಿ ಚಿತ್ರವನ್ನು ಸೃಷ್ಟಿಸುವರೋ ಅಷ್ಟೇ ಗುಣ ಮಟ್ಟದಲ್ಲಿ; ಸಾಹಿತ್ಯಕ, ಸಾಂಸ್ಕೃತಿಕ ಬರಹಗಳಲ್ಲಿಯೂ ಪ್ರಗಲ್ಭತೆಯನ್ನು ರೂಢಿಸಿಕೊಂಡು ಬಂದಿರುವುದೂ ಒಂದು ವೈಶಿಷ್ಠ್ಯ.

ಮುನ್ನುಡಿಯನ್ನು ಬರೆದು ಕೊಡಲು ವಿನಂತಿಸಿದಾಗ, ಅವರೇ ಹೇಳಿದಂತೆ, "... ... ಅಪ್ರವ್ಯದ ಕಟ್ಟಿಗೆ ಒಪ್ಪಿಕೊಂಡೆ ... ... " ಎಂಬ

ಮಾತು. ಅವರಿಗೆ ಸಮಂಜಸವೆನಿಸಿದರೂ ಅದು ನನಗೆ ಒಪ್ಪಿಗೆ ಇಲ್ಲ. ಏಕೆಂದರೆ, ಆ ಆಪ್ತತ್ವದ ಕಗ್ಗಂಟಿನಲ್ಲಿ, ಅವರ ಕಲಾಕುಂಚನ ಸುಂದರಾಕೃತಿಯು ಜೊತೆಗೆ ಸರಸತಿಯು ಲೆಕ್ಕಣಿಕೆಯೂ ಅವರಲ್ಲಿ ಇರುವುದೆಂದು ನಾನು ಅವರನ್ನು ಓದಿ ಬಲ್ಲವನಾಗಿದ್ದೆ. ಅಂತೆಯೇ ಆ ಕಗ್ಗಂಟನ್ನು ಬಿಚ್ಚಿಸಿದೆ. ಚಿತ್ರಕಲೆ, ಸಾಹಿತ್ಯಕಲೆ, ಇವೆರಡನ್ನೂ ಕರಗತ ಮಾಡಿಕೊಂಡವರು ಬಹು ವಿರಳ, ನನಗೆ ತಿಳಿದಿದ್ದು, ಹೆಸರಿಸ ಬಹುದಾದವರಲ್ಲಿ ವಿಶ್ವಕವಿ ರವೀಂದ್ರರು, ಡಾ.ಶಿವರಾಮಕಾರಂತರು, ಕೈಲಾಸಂ ಇಂಥವರ ಬೆರಳೆಣಿಕೆಯ ಪ್ರತಿಭಾವಂತರ ಸಾಲಿನಲ್ಲಿ ಶ್ರೀ ಎನ್. ಸಿ. ದೇಸಾಯಿವರನ್ನು ನಿಲ್ಲಿಸಿದರೆ ತಪ್ಪೇನಲ್ಲವೆಂಬ ಅನಿಸಿಕೆಯು ನನ್ನ ಪ್ರಾಂಜಲ ಮನಸ್ಸಿನಲ್ಲಿ ಮೂಡಿಬರುತ್ತದೆ.'

ಮುನ್ನುಡಿಯೆಂಬ ಶಬ್ದವನ್ನು ಪರಿವರ್ತಿಸಿ 'ಹಿತನುಡಿ' ಎಂದು ಹೇಳಿದ್ದು; ಸಮಯೋಚಿತ, ಸುಸಮಂಜಸ, ಸುಸಮರ್ಥನೀಯವೆಂದೇ ನನ್ನ ಭಾವನೆ. ಏಕೆಂದರೆ; ಅವರು ನನಗಿಂತಲೂ ವಯೋವೃದ್ಧರೂ, ಜ್ಞಾನವೃದ್ಧರೂ, ಆತ್ಮೀಯ ಆಪ್ತಬಳಗಕ್ಕೆ ಸೇರಿದವರೂ ಆಗಿದ್ದುದರಿಂದ 'ಹಿತನುಡಿ' ಎಂಬ ಶಬ್ದವನ್ನು ಸಂತೋಷದಿಂದ ಸ್ವೀಕರಿಸಿ, ಇದೊಂದು ಔದಾರ್ಯದ ಉಡುಗರೆಯೆಂದು ತಿಳಿದು ಅವರ ಕರಗತವಾದ ಕಲಾದೇವಿಗೆ ನಮನವನ್ನು ಸಲ್ಲಿಸುವುದರೊಂದಿಗೆ ಅವರಿಗೂ ನಮನ.

ನನ್ನ ಆತ್ಮೀಯ ಮಿತ್ರರೂ, ನಿರ್ವಂಚನೆಯ ರಾಜಕೀಯ ಸುಳಿವಿನಲ್ಲಿ ಮಿಂದು ಬಂದವರೂ, ಸಾತ್ವಿಕ ಮನೋಭಾವದವರೂ ಆದ ಮಾನ್ಯ ವಾಯ್. ಎಸ್. ಪಾಟೀಲರು, ಈ ಕೃತಿಯ ಕುರಿತು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ ಅನಿಸಿಕೆಗಳು ಈ ಕೃತಿಗೆ ಮುಕುಟಪ್ರಾಯದಂತಿವೆ ಎಂದು ಹೇಳಬಯಸುವೆ. ಅವರ ಅಂತಃಕರಣದ ಅಭಿಪ್ರಾಯಕ್ಕಾಗಿ ಅವರಿಗೆ ನನ್ನ ಅನಂತ ಕೃತಜ್ಞತೆಯ ನಮನ ಸಲ್ಲಿಸುವುದು ನನ್ನ ಕರ್ತವ್ಯ-ಧರ್ಮ.

ನಾರಿತ ಪತ್ರಿಕಾ ಕರ್ತರೂ, ಬರಹದಲ್ಲಿ ಬಹುಮುಖ ಪ್ರತಿಭೆಯುಳ್ಳ-ವರೂ ಆದ ಮಿತ್ರ ಶ್ರೀ ಸುರೇಂದ್ರ ದಾನಿಯವರು ನನ್ನೀ ಕೃತಿಗೆ ಬೆಳಕು ಬೀರುವ ಹಣತೆಯನ್ನು ಹಚ್ಚಿ ಕತ್ತಲೆಯಲ್ಲಿಯೂ ಕಾಣುವಂತೆ ಮಾಡಿರುವರು. ಅತ್ಯಲ್ಪ, ಸಮಯದಲ್ಲಿಯೇ ಸಮಗ್ರ ಪುಸ್ತಕವನ್ನೋದಿ, "... ಕಿರಿದದರಲ್ಲಿ ಪಿರಿದರ್ಥಮಂ ತೋರ್ಪ ಜಾಣ್ಮೆ..." ಎನ್ನುವಂತೆ ಸರಳ-ಸುಂದರ-ಬಂಧುರ ಅಭಿಪ್ರಾಯವನ್ನು ಬರೆದುಕೊಟ್ಟು ನನ್ನನ್ನು ಮೂಕ ವಿಸ್ಮಿತನನ್ನಾಗಿ ಮಾಡಿರುವರು. ಅವರಿಗೆ ವಂದನೆ—ಅಭಿನಂದನೆ.

ಈಗಂತೂ ಮುದ್ರಣದ ನಾವಿನ್ಯತೆಯು ಬಹುಮುಖವಾಗಿ ಹರಡಿದೆ. ವೆಚ್ಚವೂ ಕೇದಾರವನ್ನು ತಲುಪಿದೆ. ಆದರೂ, ತಮ್ಮ ಜಾಡಿನಲ್ಲಿಯೇ ಮಳಿ ಜೋಡಿಸಿ ಅಂದವಾಗಿ ಮುದ್ರಿಸಿಕೊಟ್ಟ ಮುದ್ರಣಾಲಯದ ಒಡೆಯರಾದ ಶ್ರೀ ಎಸ್. ಟಿ, ತಡಕೋಡ ಹಾಗೂ ಅವರ ಪುತ್ರ ಟಿ. ವಿರೇಶ ಅವರನ್ನು ಅಭಿನಂದಿಸುವೆ. ಮತ್ತು ಮುದ್ರಣಾಲಯದ ಇತರ ಸಿಬ್ಬಂದಿ ವರ್ಗದವರೂ ಮತ್ತು ಮುಖಪುಟದ ರಚನೆ ಮಾಡಿದ ಶ್ರೀ ನಾಗರಾಜ ಪಾಟೀಲ ಅವರೂ ಕೃತಜ್ಞತೆಗೆ ಪಾತ್ರರು.

ನನ್ನ ಓದುಬರೆಹಕ್ಕೆ ಸತತವೂ ಅನುಕೂಲ ಪರಿಸರವನ್ನು ಸೃಷ್ಟಿಸಿ ಕೊಡುತ್ತ ಬಂದಿರುವೆ ನನ್ನ ಧರ್ಮಪತ್ನಿಯನ್ನೂ, ಎಲ್ಲ ಮಕ್ಕಳನ್ನೂ, ಸೊಸೆಯಂದಿರನ್ನೂ, ಅಳಿಯಂದಿರನ್ನೂ ಮೊಮ್ಮಕ್ಕಳನ್ನೂ, ಹಾಗೂ ಗೆಳೆಯರಾದ ಸದರ ಜೋಶಿ, ದೀಕ್ಷಿತ, ಎನ್.ಎಸ್. ಕುಲಕರ್ಣಿ ಬಂಡೋಪಂತ ಡಂಬಳ ಅಲ್ಲದೆ ಚಿತ್ರಗಳನ್ನು ತನ್ನ ಕ್ಯಾಮರಾದಲ್ಲಿ ಕ್ಲಿಕ್ ಮಾಡಿದ ಚಿ. ಗುರುರಾಜನನ್ನು ನೆನೆಯದಿರಲಾರೆ.

ನನ್ನ ದೇಹದ ಯಾವುದೇ ಅಂಗದ ಆರೋಗ್ಯಕ್ಕೆ ಧಕ್ಕೆ ಬಂದಾಗ ಅದನ್ನು ಸರಿ ಪಡಿಸಿ ನನ್ನ ಓದು ಬರಹಕ್ಕೆ ಸುಗಮ ದಾರಿ ಮಾಡಿಕೊಡುತ್ತ ಬಂದಿರುವ ಡಾ॥ ಕೆ. ಸುರೇಶ, ಡಾ॥ ಎಸ್. ಕೆ. ಹೊಸೂರ, ಡಾ॥ ಡಿ. ಆರ್.

ಹಣಮುರ ಹಾಗೂ ಡಾ॥ ಆನಂದ ಬೆಟದೂರ ಈ ಚತುರ್ವೈದ್ಯನಾಥರನ್ನು ಮರೆಯಲಾರೆ.

ಈ ಮೊದಲೇ ಪ್ರಕಟಗೊಂಡ ನನ್ನ "ಗಾಲವ ಕ್ಷೇತ್ರ" ವೆಂಬ ಭಾಮಿನಿ ಷಟ್ಪದಿಯ ಪದ್ಯರೂಪದ ಕೃತಿಗೆ ವಿದ್ವಜ್ಜನರಿಂದ ಪ್ರೋತ್ಸಾಹ ದೊರೆತಿದ್ದು; ಇದನ್ನು ದೈವೀಭಕ್ತರು ಪ್ರೋತ್ಸಾಹಿಸುವರೆಂದು ನೆರೆನಂಬಿರುವೆ.

ಬೆಂಗಳೂರು
೩೦-೧೨-೧೯೯೯

ಓದುಗರ ವಿನೀತ
ಎನ್. ಕೆ. ಜೋಶಿ ( ಗಲಗಲಿ )

# ದ್ವಾದಶ ಜ್ಯೋತಿರ್ಲಿಂಗಗಳು

"ತಮಸೋಮಾ ಜ್ಯೋತಿರ್ಗಮಯ ........"

ಪೀಠಿಕೆ : ಹಿಮಾಲಯ ಪರ್ವತ ಶ್ರೇಣಿಯಲ್ಲಿ 'ಜ್ವಾಲಾಮುಖಿ' ಎಂಬುದೊಂದು ದಿವ್ಯ ಸ್ಥಾನವಿದೆ. ಭೂಮಂಡಲ ಗರ್ಭದಿಂದ ಹೊರಬಂದ ಮಹಾನ್ ಜ್ಯೋತಿಯೊಂದು ಇಲ್ಲಿ ಪ್ರಕಟಗೊಂಡಿರುವವೆಂದು ಪ್ರತೀತಿ. ಇದೊಂದು ಪ್ರತ್ಯಕ್ಷ ಪರಮೇಶ್ವರನ ತೇಜೋಮಯವಾದ ಸ್ವರೂಪವೇ ಅವತರಿಸಿದಂತೆ ಎಂದು ತಿಳಿದು ಬರುವುದು. ಈ ಪವಿತ್ರ ಜ್ಯೋತಿಯ ದರ್ಶನಾಕಾಂಕ್ಷಿಗಳಾಗಿ ಬರುವ ಭಕ್ತರ ದಂಡು ಸತತವಾಗಿರುತ್ತದೆ. ಈ ಜ್ಯೋತಿಯ ಚಮತ್ಕಾರ, ಸಾಕ್ಷಾತ್ಕಾರಗಳು ಅನೇಕ ಕಡೆಗಳಲ್ಲಿ ಕಂಡು ಬರುವವು. ಅವೇ ಹನ್ನೆರಡು ಜ್ಯೋತಿರ್ಲಿಂಗಗಳು.

ಅತೀ ಪ್ರಾಚೀನ ಕಾಲದಲ್ಲಿ ಇವೆಲ್ಲ ಸ್ಥಳಗಳು ಜ್ವಾಲಾಮುಖಿ-ಯಂತೆಯೇ ಇದ್ದುವಂತೆ. ಈಗ ಅಲ್ಲೆಲ್ಲ ಭವ್ಯ ಶಿವ ಮಂದಿರಗಳುಂಟು. ಆದರೂ ಭಕ್ತರ ಭಾವುಕತೆಗೆ ಕುಂದು ಬಂದಿರುವುದಿಲ್ಲ.

"ಓಂ ತತ್ಸವಿತುಃವರೇಣ್ಯಂ......" ಈ ಗಾಯತ್ರಿ ಮಂತ್ರದಲ್ಲಿ ಬುದ್ಧಿಗೆ ಪ್ರೇರಣೆಯನ್ನು ಕೊಡುವುದಕ್ಕೋಸ್ಕರ ಸೂರ್ಯದೇವನ ಶ್ರೇಷ್ಠ ತೇಜಸ್ಸನ್ನು ಧ್ಯಾನ ಮಾಡುವುದನ್ನು ಹೇಳಲಾಗಿದೆ. ಈ ಮಂತ್ರದ ಜಪ ಸಾಮರ್ಥ್ಯದಿಂದ ಮಾನವನಿಗೆ, ಪ್ರಾಣ ಜ್ಯೋತಿಗೆ, ಆತ್ಮಜ್ಯೋತಿಗೆ ದಿವ್ಯ ಶಕ್ತಿಯು ಪ್ರಾಪ್ತವಾಗುವುದು.

ಸೌರ ಶಕ್ತಿಯ ತೇಜದಿಂದ, ಉಷ್ಣತೆಯಿಂದ ಆದೆಷ್ಟು ಉಪಯೋಗ-ವೆಂದು ಹೇಳುವುದು ಕಠಿಣ. ಆ ಭವ್ಯ-ದಿವ್ಯ ಜ್ಯೋತಿಯ ಸಾಮರ್ಥ್ಯದಿಂದ

ಇಡೀ ಭೂಮಂಡಲದ ಆಗು ಹೋಗುಗಳು ಜರುಗುತ್ತವೆ. ಈ ಸೌರಶಕ್ತಿಗೆ ನಾವು ನಮಿಸುತ್ತೇವೆ. ಸೂರ್ಯೋಪಾಸನೆಯನ್ನು ಮಾಡುತ್ತೇವೆ. ಅರ್ಘ್ಯ-ವನ್ನು ಬಿಡುತ್ತೇವೆ. ಸೂರ್ಯಶಕ್ತಿ ಮಾತ್ರ ಸತ್ಯ. ಇನ್ನುಳಿದದ್ದು ಮಿಥ್ಯ.

ಅಗ್ನಿಯೂ ಕೂಡ ಒಂದು ಮಹಾನ್ ಜ್ಯೋತಿ. ಈ ಜಗತ್ತಿನಲ್ಲಿ ಸರ್ವಧರ್ಮೀಯರೂ ಒಪ್ಪಿಕೊಂಡಿರುವ ಸಂಗತಿ. ನಿತ್ಯ ಅಗ್ನಿ ಉಪಾಸನೆಯನ್ನು ಮಾಡುವರು. ಅಗ್ನಿಯ ಉಪಯೋಗ, ಅದರ ಮಹತ್ವ ಹಾಗೂ ಉಪಕಾರ ಎಷ್ಟು ವರ್ಣಿಸಿದರೂ ಕಡಿಮೆಯೇ.

ಸೂರ್ಯ ಮತ್ತು ಅಗ್ನಿ ಇವುಗಳ ಚಿಕ್ಕ ಪ್ರತಿಬಿಂಬವೇ ದೀಪಜ್ಯೋತಿ.
"ಸಾ ಆಜ್ಞೇನ ವರ್ತಿಸಂಯುಕ್ತಂ ವಹ್ನಿನಾಂ ಯೋಜಿತಂ ಮಯಾ
ದೀಪಂಗ್ರಹಣ ದೈವೇಶ ತ್ರೈಲೋಕ್ಯ ತಿಮಿರಾಪಃ"।
ಎಂದು ನಾವೆಲ್ಲರೂ ಪ್ರತಿದಿನವೂ ದೀಪ ಜ್ಯೋತಿಯನ್ನು ವಂದಿಸುತ್ತೇವೆ.

ಈ ದೀಪಜ್ಯೋತಿಯ ಮಹತ್ವವಂತೂ ಸಕಲರಿಗೂ ತಿಳಿದ ವಿಷಯ. ದೀಪದ ಪೂಜೆಯನ್ನು ಮಾಡುತ್ತೇವೆ, ದೇವತಾರ್ಚನೆಯ ಕಾಲದಲ್ಲಿ ದೀಪವನ್ನು ಬೆಳಗುವುದಲ್ಲದೆ ದೀಪೋತ್ಸವವನ್ನು ಜರುಗಿಸುತ್ತೇವೆ. ಕತ್ತಲೆ-ಯನ್ನು ಹೊಡೆದೋಡಿಸಲು ಹಚ್ಚುತ್ತೇವೆ. ಮಂಗಲಕಾರ್ಯದಲ್ಲಿ ದೀಪ ಹೊತ್ತಿಸಿ ಸಮಾರಂಭವನ್ನು ಉದ್ಘಾಟಿಸುತ್ತೇವೆ.

"ಶುಭಂ ಕರೋತು ಕಲ್ಯಾಣಂ ಆರೋಗ್ಯ ಧನ ಸಂಪದಾ
ಶತ್ರು ಬುದ್ಧಿ ವಿನಾಶಾಯ ದೀಪಜ್ಯೋತಿ ನಮೋಸ್ತುತೆ"।

## ಈಶ್ವರ ಲಿಂಗದ ಮಹಿಮೆ :

ಈಶ್ವರ ಲಿಂಗವು; ಬ್ರಹ್ಮ, ಮುರಾರಿ, ಸುರರು ಇವರಿಂದ ಪೂಜಿಸಲ್ಪಟ್ಟಿದೆ. ಭರತ ಖಂಡದಲ್ಲಿ ಹಲವಾರು ದೇವತೆಗಳ ವಿಗ್ರಹಗಳು ಕಂಡರೂ, ಈ ಈಶ್ವರ ಲಿಂಗದಷ್ಟು ಬಹು ಸಂಖ್ಯೆಯಲ್ಲಿ ವಿರಳ. ಈಶ್ವರ

ಲಿಂಗಗಳು ಭರತ ಖಂಡದ ತುಂಬೆಲ್ಲ ತುಂಬಿವೆ. ಭಾರತವು ಶಿವಸ್ವರೂಪಿ ಎನ್ನುವಂತಿದೆ. ಈ ಸೃಷ್ಟಿಯ ಹುಟ್ಟು–ಸಾವುಗಳಿಗೆ ಆತನೇ ಕಾರಣೀಭೂತ ನಲ್ಲವೆ ? ಭರತಖಂಡದಲ್ಲಿ ದ್ವಾದಶ ಜ್ಯೋತಿರ್ಲಿಂಗಗಳೆಂದು ಹನ್ನೆರಡು ಈಶ್ವರ ಲಿಂಗಗಳು ವೈವಿಧ್ಯಮಯ ದೈವೀ ಶಕ್ತಿಯನ್ನು ಪಡೆದುಕೊಂಡು ತೇಜೋಮಯವಾದ ಕೀರ್ತಿಯನ್ನು ಹೊಂದಿ ಇಂದಿಗೂ ದೇದೀಪ್ಯ ಮಾನವಾಗಿ ನಿಂತಿವೆ. ಸಾಮಾನ್ಯವಾಗಿ ಸಕಲ ಮಾನವಕೋಟಿಯಿಂದಲೂ ಪೂಜಿಸಲ್ಪಡುವ ದೇವನೆಂದರೆ ಈಶ್ವರನು. ಎಂದು ಹೇಳ ಬಹುದು.

## ಪೌರಾಣಿಕ ಹಿನ್ನೆಲೆ :

ಒಮ್ಮೆ ಶಿವ-ಪಾರ್ವತಿಯರ ಮಧ್ಯೆ ಕಾಮಕ್ರೀಡೆಯ ವಿಷಯದಲ್ಲಿ ಪರಸ್ಪರರಲ್ಲಿ ಮತಭೇದ ತಲೆದೋರಿ ಜಗಳ ಹುಟ್ಟಿತಂತೆ. ಆಗ ಶಿವನು ತನ್ನ ರೂಪವನ್ನು ವಿಸ್ತರಿಸಿದನಂತೆ. ಅದೇ ಪ್ರಕಾರ ಪಾರ್ವತಿಯೂ ವೃದ್ಧಿಸಿದಳಂತೆ. ಈ ಸಂದರ್ಭದಲ್ಲಿ ಪಾರ್ವತಿಯು ವಿಷ್ಣುವನ್ನು ನೆನೆದದ್ದ–ರಿಂದ. ವಿಷ್ಣು ಪಾರ್ವತಿಯ ಶರೀರದಲ್ಲಿ ಪ್ರವೇಶಿಸಿದನಂತೆ. ಈ ಪ್ರಸಂಗದಿಂದ ಚರಾಚರ ಜೀವಿಗಳಿಗೆ ತೊಂದರೆಯಾಗಲು; ಇದನ್ನರಿತ ಯಾವತ್ತೂ ದೇವಗಣ ಭಯಭೀತರಾದರು. ಆಗ ವಿಷ್ಣು ಶಿವನನ್ನು ಕರೆಯಲು; ಅವನಿಗೆ ಮುಜಗರ ವಾಗಿ ಪ್ರಜ್ಞೆ ಬಂದಿತು. ಆಗ ಬ್ರಹ್ಮನು ಶಿವನ ಸ್ತುತಿ ಮಾಡಲು; ಶಿವನು; “ ವಿಷ್ಣುವಿನ ಯೋನಿಯುಕ್ತ ಲಿಂಗವು ಹನ್ನೆರಡು ಭಾಗಗಳಾಗಿ ಪಸರಿಸಲಿ ಹಾಗೂ ಅವೆಲ್ಲವೂ ಪೂಜನೀಯವಾಗಲಿ ” ಎಂದು ವರವನ್ನಿತ್ತನು. ಆ ಪ್ರಕಾರ ವಿಷ್ಣು ತನ್ನ ಯೋನಿಯುಕ್ತ ಲಿಂಗವನ್ನು ಹನ್ನೆರಡು ಭಾಗಗಳನ್ನು ಮಾಡುವ ಸಮಯದಲ್ಲಿ ಜ್ಯೋತಿಯು ಉತ್ಪನ್ನವಾಗಿ ಪ್ರಜ್ವಲಿಸ ತೊಡಗಿತು. ಈ ಹನ್ನೆರಡು ಲಿಂಗಗಳೇ ಜ್ಯೋತಿರ್ಲಿಂಗಗಳು.

ಈ ಹನ್ನೆರಡು ಲಿಂಗಗಳಲ್ಲಿ : ಸಮುದ್ರದ ದಡದಲ್ಲಿ ಎರಡು, (೧. ಸೋಮನಾಥ, ೨. ರಾಮೇಶ್ವರ) ನದಿಯ ದಡದಲ್ಲಿ ಮೂರು (೧. ಮಹಾಕಾಲ, ೨. ತ್ರಿಂಬಕೇಶ್ವರ ೩, ಮಮಲೇಶ್ವರ ) ಪರ್ವತದ

ಎತ್ತರದಲ್ಲಿ ನಾಲ್ಕು (೧. ಮಲ್ಲಿಕಾರ್ಜುನ. ೨. ಭೀಮಾಶಂಕರ. ೩. ಕೇದಾರೇಶ್ವರ ೪. ಘೃಷ್ಣೇಶ್ವರ) ಮತ್ತು ಜನವಸತಿಯು ನಗರಗಳ ಮಧ್ಯದಲ್ಲಿ ಮೂರು (೧. ನಾಗೇಶ ೨. ವಿಶ್ವೇಶ ೩. ವೈಜನಾಥ) ಎಂತಿವೆ.

ಒಂದು ಸಲವಾದರೂ ಈ ಜ್ಯೋತಿರ್ಲಿಂಗಗಳನ್ನು ಕಂಡು ಪುನೀತರಾಗ ಬೇಕೆಂದು ಹೇಳುವರು. ಮುಕ್ತಿಯೂ ಲಭಿಸುವುದೆಂದು ಪ್ರತೀತಿ. ಅವೇ ಈ ಕೆಳಕಂಡ ಹನ್ನೆರಡು ಜ್ಯೋತಿರ್ಲಿಂಗಳು ಬನ್ನಿ ನೋಡೋಣ. ಭಕ್ತಿಯಿಂದ ತಲೆ ತಗ್ಗಿಸೋಣ.

ಈ ದ್ವಾದಶ ಲಿಂಗಗಳು ಎಲ್ಲೆಲ್ಲಿ ಇವೆ ಎನ್ನುವ ಕುರಿತು ಸುಂದರವಾದ ಸಂಸ್ಕೃತ ಶ್ಲೋಕವದುಂಟು ಅದನ್ನು ಬಾಯಿ ಪಾಠ ಮಾಡಿ ನಿತ್ಯ ಪಠಿಸಿದರೆ ಅವಿರುವ ಸ್ಥಳ, ರಾಜ್ಯ ಮತ್ತು ಮಹಿಮೆ ತಿಳಿಯುವುದು. ಈ ಜ್ಯೋತಿರ್ಲಿಂಗಗಳನ್ನು ಪ್ರತ್ಯಕ್ಷ ದರ್ಶನ ಮಾಡಿಕೊಳ್ಳುವುದು ಆಗದಿದ್ದರೆ ಈ ಕೆಳಗಿನ ಶ್ಲೋಕವನ್ನು ನಿತ್ಯಪಠಿಸಿದರೆ ದರ್ಶನಲಾಭವಷ್ಟೇಯಲ್ಲ ಪಾಪವೂ ಪರಿಹಾರವಾಗುವುದೆಂದು ಪ್ರತೀತಿ.

"ಸೌರಾಷ್ಟ್ರೇ ಸೋಮನಾಥಂಚ ಶ್ರೀಶೈಲೆ ಮಲ್ಲಿಕಾರ್ಜುನಂ
ಉಜ್ಜಯಿನ್ಯಾಂ ಮಹಾಕಾಲ–ಮೋಂಕಾರ ಮಮಲೇಶ್ವರಂ
ಪರಲ್ಯಾಂ ವೈಜನಾಥಂಚ ಡಾಕಿನ್ಯಾಂ ಭೀಮಶಂಕರಂ
ಶೇತು ಬಂಧೇತು ರಾಮೇಶಂ ನಾಗೇಶಂ ದಾರುಕಾವನೆ
ವಾರಣಾಸ್ಯಾಂತು ವಿಶ್ವೇಶಂ ತ್ರ್ಯಂಬಕಂ ಗೌತಮೀ ತಟೆ
ಹಿಮಾಲಯೇತು ಕೇದಾರಂ ಘೃಸ್ನಣೇಶಂ ಶಿವಾಲಯೆ
ಏತಾನಿ ಜ್ಯೋತಿರ್ಲಿಂಗಾನಿ ಸಾಯಂ ಪ್ರಾತಃ ಪಠೇನ್ನರಃ
ಸಪ್ತಜನ್ಮ ಕೃತಂ ಪಾಪಂ ಸ್ಮರಣೇನ ವಿನಶ್ಯತಿ"॥

ಈ ಹನ್ನೆರಡು ಜ್ಯೋತಿಲಿಂಗಗಳ ಕುರಿತು ವಾರ್ಧಿಕ ಷಟ್ಪದಿಯು ಪದ್ಯ ಗಳಲ್ಲಿ ಈ ಕೆಳಗಿನಂತೆ ಮೂಡಿಸಿರುವೆ.

# ದ್ವಾದಶ ಜ್ಯೋತಿರ್ಲಿಂಗಗಳು

ಗುಜರಾತ ರಾಜ್ಯದಲಿ ಪ್ರಭಾಸ ಪಟ್ಟಣದಿ
ಗಜಗಾತ್ರ ತೆರೆಗಳರಬೀಯಂಬ್ಧಿ ತಟದಲ್ಲಿ
ನಿಜಜ್ಯೋತಿ ಬೆಳಗಿಸುತ ಭಕ್ತರಾ ಮನದಲ್ಲಿ ನಿಂತಿಹನು **ಸೋಮನಾಥ**
ಅರ್ಜುನನ ಪೆಸರಿನಲಿ ಮಲ್ಲಿಕಾಸಿತಮಾಲೆ
ನಿಜ ಶಿಖಿಯು ಲಿಂಗದಲಿ ಧರಿಸಿಯುವರನು ಹರಸಿ
ಭಜಿಸಿ ಶಿಖರವ ನೋಡಿದಾ ಭಕುತರಿಗೆ ಮುಕ್ತಿ **ಮಲ್ಲಿಕಾರ್ಜುನ**ನಿತ್ತನು ॥೧॥

ಉಜ್ಜಯನಿ ನಗರದಲಿ ಜನರ ಸಾಗರದಲ್ಲಿ
ಮಜ್ಜನವ ಗೈದಿಹರು ಭಸ್ಮದಾರತಿ ಮಾಡಿ
ಸಜ್ಜನರು ಭಕ್ತಿಯಲ್ಲಭಿಷೇಕ ಮಾಡುವರು **ಮಹಾಕಾಲೇಶ್ವರ**ನಿಗೆ
ಭರ್ಜರಿಯ ನರ್ಮದೆಯ ಓಂಕಾರವೃತ್ತದಲಿ
ಗರ್ಜನೆಯ ಗೈಯುತ್ತ ರಮಣೀಯ ಸೃಷ್ಟಿಯಲಿ
ದುರ್ಜನರ ಸದೆಬಡೆದು ಭಕ್ತರಿಗೆ ವರವೀವ **ಓಂಕಾರ ಮಮಲೇಶ್ವರ** ॥೨॥

ಮಹಾರಾಷ್ಟ್ರ ರಾಜ್ಯದ ಪರಳಿಯಂಬೂರಿನಲಿ
ಬ್ರಹ್ಮವೇಳಾರಿ ಸರಸತಿ ನದಿಯು ಸಂಗಮದಿ
ಬಹುರಮ್ಯವೆಂದೆನಿಪ ಕಾಂತಿಪುರ ಕ್ಷೇತ್ರದಲಿ ನಿಂತಿಹನು **ವೈಜನಾಥ**
ಬಹುಧನ್ಯ ಪುಣೆ ಜಿಲ್ಲೆ ಭೀಡ ತಾಲೂಕಿನಲಿ
ಸಹ್ಯಾದ್ರಿ ಪರ್ವತದ ಮೇಲ್ಬದಿಯ ಘಟ್ಟದಲಿ
ಬ್ರಹ್ಮಾಂಡ ಬೆಳಕನ್ನು ಬೀರುತ್ತ ಭಕ್ತರಿಗ ನಿತ್ಯ **ಭೀಮಾಶಂಕರ** ॥೩॥

ಮೂರಬ್ಧಿ ಜಲಸಂಧಿ ಸೇತು ಬಂಧನದಲ್ಲಿ
ಕರುಣಾಳನೆಂದೆನಿಪ ಶ್ರೀರಾಮ ಸ್ಥಾಪಿಸಿದ
ನರಜನ್ಮ ಪೂಜಿಸಲು ಮುಕ್ತಿ ಪಡೆಯುಲೆಂದೆನುತ ಶಿವಲಿಂಗ **ರಾಮೇಶ್ವರ**
ಪರಭರಣಿ ಜಿಲ್ಲೆಯಲಿ ದಾರುಕಾವನದಲ್ಲಿ
ನರರ ಗುಂಪಿನ ಮಧ್ಯೆ ಭಕ್ತ ವೃಂದಕೆ ವೇದ್ಯ
ನಿರುತದಲಿ ಹರಸುತ್ತಲಿರುತಿರುವ ಭಕ್ತರನು ನಿಜಲಿಂಗ **ನಾಗೇಶ್ವರ** ॥೪॥

ಗಂಗಾ ತಟಾಕದಲಿ ಪುರುಜನ್ಮ ವಿರದಿರ್ದ
ಮಂಗಳದ ವಾರಾಣಾಸಿಯು ಸಂಗಮದ ತಟದಿ
ಕಂಗಳನು ತೆರೆದಾ ಜಗಕೆ ಜ್ಯೋತಿಯುನೀಯುತ್ತ ನಿಂತಿಹನು ವಿಶ್ವೇಶ್ವರ
ಗಂಗೆಯನು ಕರೆತಂದು ಮುನಿ ಶ್ರೇಷ್ಠ ಗೌತಮರು
ಭಂಗ ಬರದಲೆ ಹರಸಿ ಬ್ರಹ್ಮಗಿರಿ ಮೇಲಿಂದ
ಮಂಗಳದಲಭಿಷೇಕ ಮಾಡಿದರು ಗಿರಿಯೊಡೆಯ ಶ್ರೀ ತ್ರಿಂಬಕೇಶ್ವರನಿಗೆ॥೫॥

ಪಾಂಡವರು ಬೆಂಬತ್ತಿ ಶಂಕರನನರಸುತ್ತ
ಹಿಂಡು ವನದಲಿ ಹಿಡಿದ ಗೂಳಿ ಡುಬ್ಬವ ಭೀಮ
ಕಡಿದಾದ ಕೇದಾರ ಪರ್ವತದ ಶ್ರೇಣಿಯಲಿ ಕೇದಾರನಾಥನನ್ನು
ಮೃಡನ ಮಾಡದಿರುಳು ತಿಕ್ಕಿ ಕರದಿ ಕುಂಕುಮ ಹಳದಿ
ಮಿಡು ವಿಲುಗಂಗಾ ಜಲದ ಮಿಲನದಿಂ ಕಲೆಸಿ
ಧೃಡವಾದ ಘರ್ಷಣದಿ ಶಿವಲಿಂಗ ವುದ್ಭವಿಸಿ ಘೃಷ್ಣೇಶನಾಗಿ ಬಂದ ॥೬॥



# ೧. ಶ್ರೀ ಸೋಮನಾಥ

ಶಾಪ ವಿಮುಕ್ತಿ (Deliverness from Curse) ಎಂದು ಒಕ್ಕಣಿಕೆ,

ಇದು ಈಗಿನ ಗುಜರಾತ ರಾಜ್ಯದಲ್ಲಿದೆ. ಅರಬ್ಬಿ ಸಮುದ್ರದ ದಂಡೆಯಲ್ಲಿದೆ, ಈ ಭಾಗವನ್ನು ಪ್ರಭಾಸ ಪಟ್ಟಣವೆಂದೂ ಕರೆಯುವರು. ದೇವತಾ ಪ್ರತಿಷ್ಠಾಪನೆಯನ್ನು ಮಾಡಬೇಕಾದರೆ ಶಾಸ್ತ್ರೋಕ್ತವಾದ ಕ್ರಿಯಾ ಕರ್ಮ-ಗಳಲ್ಲದೆ ಪ್ರತಿಷ್ಠಾಪನೆಯು ಪಾಣೀ ಪೀಠದಲ್ಲಿ; ಕನಕ ವಜ್ರ ವೈಡೂರ್ಯ, ಮುತ್ತು, ರತ್ನ, ಮೊದಲಾದ ದ್ರವ್ಯಗಳನ್ನಿಟ್ಟು ಮೂರ್ತಿ ಪ್ರತಿಷ್ಠಾಪಿಸುವ ಪದ್ಧತಿಯು ಅನೂಚಾನವಾಗಿ ನಡೆದು ಬಂದಿದೆ. ಈಗಲೂ ಕಿಂಚಿತ್ ಪ್ರಮಾಣದಲ್ಲಾದರೂ ಇಡುವ ಪದ್ಧತಿಯುಂಟು. ಹಿಂದೆ ನಮ್ಮ ದೇಶದಲ್ಲಿ ಬಂಗಾರದ ಹೊಗೆ ಹಾಯುತ್ತಿತ್ತಂತೆ. ಕನಕ ವೃಷ್ಟಿಯೂ ಸುರಿಯುತ್ತಿ-ತ್ತೆಂದೂ ಪುರಾಣಗಳಿಂದ, ಇತಿಹಾಸದಿಂದ ವೇದ್ಯ. ಇದಕ್ಕೆ ಸಾಕ್ಷಿ ಎಂಬಂತೆ ಈಗಿನ ಪೀಳಿಗೆಯೂ ನಂಬಬಹುದಾದ ; ರಾಜ ಮಹಾರಾಜರ ಸುವರ್ಣ, ವಜ್ರ, ವೈಡೂರ್ಯ, ರತ್ನ, ಖಚಿತ ಸಿಂಹಾಸನಗಳನ್ನೂ ಸುವರ್ಣ ಲೇಪಿತ ಅರಮನೆಗಳನ್ನೂ ಈಗಲೂ ನೋಡಬಹುದು.

ಈ ಸೋಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸುವ ಸಮಯದಲ್ಲಿ; ಆಗಿನ ಕಾಲದಲ್ಲಿ ಧಾರಾಳವಾಗಿ ಲಭ್ಯವಿದ್ದ ಕನಕ, ವಜ್ರ, ವೈಡೂರ್ಯ, ಮುತ್ತು, ರತ್ನ ಮೊದಲಾದವುಗಳನ್ನು ಲಿಂಗದ ಪಾಣೀ ಪೀಠದಲ್ಲಿ ವಿಪುಲವಾಗಿಟ್ಟು ಪ್ರತಿಷ್ಠಾಪಿಸಿರುವುದು ಸ್ವಾಭಾವಿಕ. ಇಷ್ಟೊಂದು ಸಂಪದ್ಭರಿತವಾದ ನಮ್ಮ ದೇಶವನ್ನು ಸೂರೆಗೈಯಬೇಕೆಂದು ಪರರಾಷ್ಟ್ರದವರು ಅಭಿಲಾಷೆ ಪಟ್ಟಿರುವುದು ಸ್ವಾಭಾವಿಕ. ಇದಕ್ಕೆ ನಮ್ಮ ಸೋಮಾರಿತನವಲ್ಲದೆ ಪುಕ್ಕಲತನವೂ ಇರಬಹುದು. ಗಝನಿ ಮಹಮ್ಮದನೆಂಬ ಮಹಮ್ಮದೀಯ ರಾಜನು ಲೂಟಿಮಾಡುವ ಉದ್ದೇಶದಿಂದ ನಮ್ಮ ದೇಶದ ಮೇಲೆ ದಂಡೆತ್ತಿ ಬಂದು ಸೋಮನಾಥ ದೇವಸ್ಥಾನದ ಮೇಲೆ ಅದೆಷ್ಟೋ ಸಲ

ದಾಳಿ ಮಾಡಿದರೂ ಸಫಲನಾಗಲಿಲ್ಲ. ಕಡೆಗೆ ಹನ್ನೊಂದನೆಯ ಸಲ ದಾಳಿ ಮಾಡಿ, ಈಶ್ವರ ಲಿಂಗವನ್ನೂ ದೇವಾಲಯವನ್ನೂ ನಾಶಪಡಿಸಿ ಲಿಂಗದಡಿಯಲ್ಲಿ ಹೂಳಲಾದ ಅಗಣಿತದ ಸಂಪತ್ತನ್ನು ಸೂರೆಹೊಡೆದು ತನ್ನ ದೇಶಕ್ಕೆ ಕೊಂಡೊಯ್ದನೆಂದು ಇತಿಹಾಸವು ಸಾರಿ ಹೇಳುತ್ತದೆ.

ಹಿಂದಕ್ಕೆ ಈ ಮಂದಿರದಲ್ಲಿ ಸುಮಾರು ಎರಡು ಮಣ ತೂಕದ ಬಂಗಾರದ ಗಂಟೆ ಇತ್ತೆಂದೂ; ಅಲ್ಲಿದ್ದ ೫೬ ಖಂಡಗ ವಜ್ರ, ವೈಡೂರ್ಯ, ಮಾಣಿಕ್ಯ, ಪಚ್ಚ ಮೊದಲಾದ ರತ್ನಗಳಿಂದ ಶಿವಲಿಂಗ ದಡಿಯಲ್ಲಿ ಹೂಳಲ್ಪಟ್ಟಿತ್ತೆಂದೂ ತಿಳಿದು ಬರುವುದು. ಮಂದಿರದ ಗರ್ಭಗುಡಿಯಲ್ಲಿ ಅಹೋರಾತ್ರಿ ರತ್ನದೀಪ ಪ್ರಜ್ವಲಿಸುತ್ತಿತ್ತಂತೆ.

ಹಿಂದಕ್ಕೆ ಸೋಮನಾಥನ ಪೂಜೆ, ಅಭಿಷೇಕಗಳಿಗೆ; ಹರಿದ್ವಾರ, ಕಾಶಿ ಪ್ರಯಾಗ ಕ್ಷೇತ್ರಗಳಿಂದ ಗಂಗಾ ಜಲವನ್ನು ಪ್ರತಿದಿನವೂ ತಂದು ಜರುಗಿಸುತ್ತಿದ್ದರಂತೆ. ನಿತ್ಯನೈಮಿತ್ತಿಕ ಉಪಾಸನೆಯ ಸಲುವಾಗಿ ಸಾವಿರಾರು ದ್ವಿಜರನ್ನು ನೇಮಿಸಿದ್ದರಂತೆ. ಮಂದಿರದ ದರಬಾರದಲ್ಲಿ ಮೂರುವರೆ ನೂರು ನಾಟ್ಯರಾಣಿಯರಿಂದ ನೃತ್ಯ ಜರುಗುತ್ತಿದ್ದವಂತೆ. ಈ ದೇವಸ್ಥಾನಕ್ಕೆ ಹತ್ತು ಸಹಸ್ರ ಗ್ರಾಮಗಳ ಉಂಬಳಿ ಇತ್ತಂತೆ.

## ಪೌರಾಣಿಕ ಹಿನ್ನಲೆ :

ಬ್ರಹ್ಮದೇವನ ಪುತ್ರ ದಕ್ಷ. ಈತನು ತನ್ನ ೨೭ಮಂದಿ ಪುತ್ರಿಯರನ್ನು ಚಂದ್ರ ದೇವನಿಗೆ ಕೊಟ್ಟು ಮದುವೆ ಮಾಡಿದನು. ಆದರೆ, ಚಂದ್ರನು ರೋಹಿಣಿ ಎಂಬುವಳನ್ನೆ ಪ್ರೀತಿಸಿ ಇನ್ನುಳಿದವರನ್ನು ಉಪೇಕ್ಷಿಸಿದ ಪ್ರಯುಕ್ತ, ದಕ್ಷನು ಚಂದ್ರನಿಗೆ ಕ್ಷಯರೋಗದಿಂದ ಪೀಡಿತನಾಗೆಂದು ಶಾಪಕೊಟ್ಟನು. ನಂತರ ಚಂದ್ರನು ತನ್ನ ಶಾಪ ವಿಮೋಚನೆಗಾಗಿ ಶಂಕರನನ್ನು ಆರಾಧಿಸಲು ಶಂಕರನು ಪ್ರತ್ಯಕ್ಷನಾಗಿ; "ಒಮ್ಮೆ ಕೊಟ್ಟ ಶಾಪವನ್ನು ಪೂರ್ಣ ಕಳೆಯಲು ಬರದು ಅದನ್ನು ಸ್ವಲ್ಪಮಟ್ಟಿಗಾದರೂ ಅನುಭೋಗಿಸಲೇಬೇಕು. ಆದರೂ

ತಿಂಗಳಲ್ಲಿ ೧೫ ದಿನ ಬೆಳೆಯುತ್ತ ಹೋಗಿ ಹುಣ್ಣಿಮೆಯಂದು ಪೂರ್ಣ ಚಂದ್ರನಾಗಿಯೂ, ತದನಂತರದ ೧೫ ದಿನ ಕ್ಷೀಣಿಸುತ್ತ ಹೋಗಿ, ಅಮಾವಾಸ್ಯೆಯಂದು ಪೂರ್ಣ ಕ್ಷಯನಾಗುವಿ" ಎಂದು ಈಶ್ವರನು ಅಭಯವಿತ್ತನು. ಈ ಪರಿ ಚಂದ್ರನಿಗೆ ವರದಾನವಿತ್ತು ಶಿವನು ಯಾವಸ್ಥಳದಲ್ಲಿ ಪ್ರತ್ಯಕ್ಷನಾಗಿದ್ದನೋ ಆ ಸ್ಥಳದಲ್ಲಿ ತೇಜೋಮಯವಾದ ಜ್ಯೋತಿರ್ಲಿಂಗವಂದು ಉದ್ಭವವಾಯಿತು. ಆ ಲಿಂಗವನ್ನು ಅಲ್ಲಿಯೇ ಪ್ರತಿಷ್ಠಾಪಿಸಿ ಸುವರ್ಣಮಂದಿರ ವಂದನ್ನು ಚಂದ್ರನು ಕಟ್ಟಿಸಿ, ಆ ಸ್ಥಳದ ದರ್ಶನವನ್ನು ಮಾಡುವ ಕ್ಷಯ ರೋಗಿಗಳ ಕ್ಷಯ ಪರಿಹಾರವಾಗಲೆಂದೂ ಚಂದ್ರನು ವರವಿತ್ತನಂತೆ.

ಚಂದ್ರ (ಸೋಮ)ನು ಈ ಲಿಂಗವನ್ನು ಸ್ಥಾಪಿಸಿದ ಪ್ರಯುಕ್ತ ಇದನ್ನು ಸೋಮನಾಥ ಲಿಂಗವೆಂದು ಕರೆದಿರುವರು. ಚಂದ್ರನಿಗೆ ಪುನಃ ಪ್ರಭಾ ( ಬೆಳಕು ) ಪ್ರಾಪ್ತವಾದ ನಿಮಿತ್ತ ಆ ಸ್ಥಳವನ್ನು ಪ್ರಭಾಸ ಪಟ್ಟಣವೆಂದೂ ಕರೆದರು. ಈ ಪ್ರಕಾರ ಸ್ಕಂದ ಪುರಾಣದಲ್ಲಿ ಉಲ್ಲೇಖವಿರುವುದನ್ನು ಕಾಣಬಹುದು.

ಈ ಭಾಗದ ಸಮುದ್ರ ತೀರದ ಆಸು ಪಾಸಿನಲ್ಲಿ ಪುರಾಣ ಪ್ರಸಿದ್ಧವಾದ ಸೂರ್ಯ ಮಂದಿರ, ಅಲ್ಲಿ ಮೂರ್ತಿ ಇರುವುದಿಲ್ಲ. ಇರದಿದ್ದರೂ ಈ ಮಂದಿರದ ಶಿಲ್ಪಕಲಾ ಚಾತುರ್ಯದ ಶ್ರೇಷ್ಠತೆಯನ್ನು ಕಾಣಬಹುದು. ಈ ಮಂದಿರವು ಭಗ್ನಾವಶೇಷವಾಗಿದೆ. ಭದ್ರಕಾಲಿ ಎಂಬ ಪ್ರಾಚೀನ ಮಂದಿರ ವಂದಿದ್ದು ಅದರ ಪ್ರವೇಶ ದ್ವಾರದ ಹತ್ತಿರದ ಬದಿಯಲ್ಲಿ ೫೧ ಶ್ಲೋಕಗಳ ಶಿಲಾ-ಲೇಖನವಿದ್ದು; ಅದರಲ್ಲಿ, ಕುಮಾರ ಪಾಲ ರಾಜನೆಂಬವನು ಈ ಮಂದಿರವನ್ನು ಕಟ್ಟಿಸಿ ದತ್ತಿ-ದಾನಗಳನ್ನಿತ್ತನೆಂಬ ಉಲ್ಲೇಖವಿದೆ. ದೇವೋತ್ಸರ್ಗವೆಂಬ ಸ್ಥಳದಲ್ಲಿ ಹಿರಣ್ಯನದಿಗೆ ಬೃಹದಾಕಾರದ ಘಾಟ ವಂದಿದ್ದು ಶ್ರೀ ಕೃಷ್ಣನ ಅಂತ್ಯಸಂಸ್ಕಾರದ ಸ್ಥಳವೆಂದು ಪ್ರತೀತಿ. ಇಲ್ಲಿ ಭವ್ಯ ದಿವ್ಯ ಅನೇಕ ಸ್ಮಾರಕ ಸ್ತಂಭಗಳನ್ನು, ಗೀತಾಮಂದಿರಗಳನ್ನು ಕಟ್ಟಿರುವರು. ಶ್ರೀ ಕೃಷ್ಣನ ಪಾರ್ಥಿವ ಶರೀರದ ಅಗ್ನಿಸಂಸ್ಕಾರವನ್ನು ಮಾಡಲು ಬಂದಾಗ ಆ ಸ್ಥಳದಲ್ಲಿ ಭಗವಾನ್ ಶ್ರೀ ಕೃಷ್ಣನ ಸ್ಫಟಿಕದ ಮೂರ್ತಿಯನ್ನು ಮಾಡಿಟ್ಟಿರುವರು.

ಈ ಮೂರ್ತಿಯ ಮುಂದೆ ನಿಂತು ಏಕ-ಚಿತ್ತದಿಂದ ಶ್ರೀ ಕೃಷ್ಣನನ್ನು ಸ್ಮರಿಸಿದರೆ ಆತನ ಪೂರ್ಣ ಚರಿತ್ರೆಯೇ ಕಣ್ಣು ಮುಂದೆ ಕಟ್ಟಿದಂತಾಗುವುದು. ಮಥುರೆಯ ಬಂದಿಯ ಮನೆಯಲ್ಲಿ ಶ್ರೀ ಕೃಷ್ಣನ ಜನ್ಮ, ಗೋಕುಲದ ನಂದನ ಮನೆಯಲ್ಲಿ ಬಾಲ್ಯ-ಯೌವನಗಳು, ಕಂಸನ ದರ್ಬಾರಕ್ಕೆ ಬಂದು ಆತನ ವಧೆ ಬೃಂದಾವನದಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ರಾಸಲೀಲೆ, ಸಾಂದೀಪ ಮುನಿಗಳ ಆಶ್ರಯದಲ್ಲಿ ವಿದ್ಯಾಭ್ಯಾಸ, ಕುರುಕ್ಷೇತ್ರದ ಮಹಾಭಾರತದ ಯುದ್ಧದಲ್ಲಿ ಅರ್ಜುನನಿಗೆ ಸಾರಥ್ಯ ಮಾಡಿ ಪಾಂಡವರಿಗೆ ವಿಜಯವನ್ನು ತಂದು ಕೊಟ್ಟದ್ದು, ಆ ಸಮಯದಲ್ಲಿ ಅರ್ಜುನನಿಗೆ ಗೀತೋಪದೇಶ ಮಾಡಿದ್ದು ಯಾದವರ ಯಾದವೀ ಕಲಹದ ನಂತರ ನಿಮಿತ್ತ ಮಾತ್ರವೆಂಬಂತೆ ಶ್ರೀ ಕೃಷ್ಣನ ಕಾಲಲ್ಲಿ ಬಾಣನೆಟ್ಟು ತನ್ನ ಅವತಾರದ ಸಮಾಪ್ತಿ ಇವೆಲ್ಲ ಮೈನವಿರೇಳುವ ಆತನ ಜೀವನ ಚರಿತ್ರೆಯನ್ನು ಇಲ್ಲಿ ಕಂಡು ನಮಿಸಿ ಧನ್ಯರೆಂದೆನಿಸಿಕೊಳ್ಳಬೇಕು.

ಪ್ರಭಾಸ ಪಟ್ಟಣದಲ್ಲಿ ಸೋಮನಾಥನ (ಶಿವನ) ದರ್ಶನವನ್ನು ಪಡೆದು ಧನ್ಯರಾಗಿ, ಅನತಿ ದೂರದಲ್ಲಿರುವ ಶ್ರೀಕೃಷ್ಣನ ಜೀವನ ಚರಿತೆಯನ್ನು ತಿಳಿದು ಕೊಂಡರೆ ಧನ್ಯತೆಯ ಪರಮಾನಂದವನ್ನು ತಲುಪಲೆಂಬಾಶಯದಿ ಶ್ರೀಕೃಷ್ಣನ ದರ್ಶನವನ್ನು ಮಾಡಿರೆಂಬ ಅಭಿಲಾಷೆಯಿಂದ ಆ ಸ್ಥಳದ ಮಹಿಮೆಯನ್ನು ಇಲ್ಲಿ ಹೇಳಿರುವೆ.

ಪ್ರಭಾಸ ಪಟ್ಟಣದ ಪರಿಸರದಲ್ಲಿ ; ಪೂರ್ವಕಾಲದಲ್ಲಿ ಅಗಸ್ತ್ಯಮುನಿ ಸಮುದ್ರ ಪ್ರಾಶನ ಮಾಡಿದನಂತೆ. ಪುರಾಣ ಪ್ರಸಿದ್ಧರಾದ ; ಜನಮೇಜಯ ರಾವಣ ಮೊದಲಾದವರು ಈ ಸೂರ್ಯಪ್ರಕಾಶವಾದ ಪ್ರಭಾಸ ಪಟ್ಟಣ ಕ್ಷೇತ್ರದ ದರ್ಶನ ಮಾಡಿದರಂತೆ. ಶಿವರಾತ್ರಿಯಂದು ಈ ಸೋಮನಾಥ ಜ್ಯೋತಿರ್ಲಿಂಗದ ಮಹೋತ್ಸವವು ಒಳ್ಳೇ ವಿಜೃಂಭಣೆಯಿಂದ ಜರುಗುವುದು.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದನಂತರ, ಉಕ್ಕಿನ ಮನುಷ್ಯರೆಂದೇ ಅನಿಸಿಕೊಂಡ ಕೇಂದ್ರ ಸರ್ಕಾರದ ಗೃಹಮಂತ್ರಿ ಹಾಗೂ ಉಪ-ಪ್ರಧಾನ

ಮಂತ್ರಿಗಳಾದ ಶ್ರೀ ವಲ್ಲಭಭಾಯಿ ಪಟೇಲರ ಧೃಡ ಸಂಕಲ್ಪದಿಂದ ಈ ಸೋಮೇಶ್ವರ ಲಿಂಗವು ಮರುಪ್ರತಿಷ್ಠಾಪಿಸಲ್ಪಟ್ಟಿತು. ಅರಬೀ ಸಮುದ್ರದ ತೀರದಲ್ಲಿ ಪ್ರಭಾಸ ಪಟ್ಟಣದಲ್ಲಿ ಈಗಿರುವ ಭವ್ಯ ಮಂದಿರವನ್ನು ಕಟ್ಟಿಸಲಾಯಿತು. ಪೌರಾಣಿಕ ಹಾಗೂ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದಂಥ ಈ ಲಿಂಗಕ್ಕೆ ಪುನಃಚೇತನ ಬರುವಂತೆ ಕಾರಣೀಭೂತರಾದ ವಲ್ಲಭಭಾಯಿ ಪಟೇಲರು ಪ್ರಾತಃಸ್ಮರಣೀಯರು.

ಈಗಿನ ಮಂದಿರವು ಬಹು ದಿವ್ಯ-ಭವ್ಯವಾಗಿದೆ. ಸಾಗರ ತೆರೆಗಳ ನಿನಾದ ಮಾಧುರ್ಯದಿಂದ ಶಿವಕೀರ್ತನೆಯನ್ನು ಮಾಡುತ್ತ ಲಿಂಗಕ್ಕೆ ಅಭಿಷೇಕವನ್ನು ಮಾಡುವದೇನೋ ಅನ್ನುವಂತೆ ತೊರುವವು.

ಈಶ್ವರನ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಈ ಸೋಮನಾಥ ಜ್ಯೋತಿರ್ಲಿಂಗಕ್ಕೆ ವಿಶೇಷ ಸ್ಥಾನ.

"ಸೌರಾಷ್ಟ್ರದೇಶೆ ವಿಶದೇತಿರಮ್ಯೇ ಜ್ಯೋತಿರ್ಮಯಂ ಚಂದ್ರ-
ಕಲಾವತಂಸಮ್ ।
ಭಕ್ತಿಪ್ರದಾನಾಯ ಕೃಪಾವ ತೀರ್ಣಂ ತಂ ಸೋಮನಾಥಂ ಪ್ರಪದ್ಯತೆ"॥
— ಆದಿ ಶಂಕರಾಚಾರ್ಯ

"ಸೋಮಲಿಂಗಂ ನರೋದೃಷ್ಟ್ವಾ ಸರ್ವಪಾಪಾತ್ ಪ್ರಮುಚ್ಚತೆ ।
ಲಬ್ಧ್ವಾಫಲಂ ಮನೋಽಭೀಷ್ಟಂ ಮೃತಃ ಸ್ವರ್ಗಂ ಸಮೀಹತೆ"॥

(ಈ ಸೋಮನಾಥ ಲಿಂಗದ ದರ್ಶನ ಮಾತ್ರದಿಂದ ಮಾನವನು ಯಾವತ್ತೂ ಪಾಪಕರ್ಮಗಳಿಂದ ದೋಷ ಮುಕ್ತನಾಗುವನು. ಮತ್ತು ಯಾವತ್ತೂ ಮನೋಬಯಕೆಗಳು ಪೂರೈಸಿ ಮರಣಾನಂತರ ಸ್ವರ್ಗವನ್ನು ಪಡೆಯಲು ಅರ್ಹನಾಗುವನು.)

ಕನ್ನಡದಲ್ಲಿ ಶ್ರೀ ಸೋಮನಾಥನನ್ನು ಪದ್ಯದಲ್ಲಿ ತಿಳಿಯಪಡಿಸಿರುವೆ.

## ಶ್ರೀ ಸೋಮನಾಥ

ಚಾರು ಚಂದ್ರನು ಭಿನ್ನ ಭಾವವ ತೋರೆ ಪತ್ನಿಯರಲ್ಲಿಯೆ
ಘೋರ ಶಾಪವನಿತ್ತು ಬಿಟ್ಟನು ದಕ್ಷ ಭೂಪತಿ ಮಾವನು ॥೧॥

ಕುಷ್ಟರೋಗವು ತಗುಲಿ ನಿನ್ನಯ ತನುವು ತುಂಬಲಿ ಎನ್ನುತ
ಕಷ್ಟಪಡುತಲಿ ನೀನು ಭೋಗಿಸು ಪಡೆದ ಭಾಗ್ಯವವೆನ್ನುತ ॥೨॥

ಸೋಮನಾಮನು ಶಿವನ ಜಪಿಸುತ ತಪವ ಗೈಯ್ಯಲು ಶಂಕರ
ಭೀಮ ಬಲಯುತ ಕುಷ್ಟ ರೋಗವು ಬೆಳೆದು ಅಳಿಯಿತು ಪಕ್ಷಕೆ ॥೩॥

ಸೋಮನಾಥನ ಲಿಂಗ ದರ್ಶನ ಮನದ ಬಯಕೆಯು ಫಲಿಸುತ
ರಾಮ ಬಾಣದಿ ನೇರ ಗುರಿಯಲಿ ಮುಕ್ತಿ ಮಾರ್ಗಕೆ ಒಯ್ಯುತ ॥೪॥

—○—




ಶ್ರೀ ಮಲ್ಲಿಕಾರ್ಜುನ

# ೨. ಶ್ರೀ ಮಲ್ಲಿಕಾರ್ಜುನ

ಶ್ರೀ ಮಲ್ಲಿಕಾರ್ಜುನ ಲಿಂಗವನ್ನು ಪರಿಚಯಿಸಬೇಕಾದರೆ ಆತನು ವಾಸಿಸಿರುವ ಶ್ರೀಶೈಲ ಕ್ಷೇತ್ರವನ್ನು ಪರಿಚಯಿಸುವುದೂ ಸೂಕ್ತವೆಂಬ ಕಾರಣದಿಂದ, ಶ್ರೀಶೈಲದ ವಿಸ್ತೃತ ವರ್ಣನೆಯನ್ನು ಮಾಡಲಾಗಿದೆ. ಸ್ಥಳದ ಮಹಿಮೆಯೂ ದೇವರ ಮಹಿಮೆಗೆ ಪೋಷಕವಾಗುವುದು.

## ಅ) ಶ್ರೀಶೈಲದ ವರ್ಣನೆ :

ನಿಸರ್ಗರಮ್ಯ ಶ್ರೀಶೈಲ. ಶ್ರೀಶೈಲ ಪರ್ವತವು ಭಾರತದ ಪರ್ವತಗಳಲ್ಲಿ ಶ್ರೇಷ್ಠವೆನಿಸಿದೆ. ಪೂರ್ವಕಾಲದಲ್ಲಿ ಇಲ್ಲಿ ಮುನಿಗಳು, ಸಾಧು ಸಂತರು. ಸಿದ್ಧ ಪುರುಷರು ಎಲೆ ಮನೆಗಳನ್ನು ಕಟ್ಟಿಕೊಂಡು ತಪಸ್ಸಿನಲ್ಲಿ ತೊಡಗಿದ್ದರೆಂದು ಪದ್ಮ ಪುರಾಣದಿಂದ ತಿಳಿದು ಬರುತ್ತದೆ.

ಇಲ್ಲಿ ಎಲ್ಲ ತರಹದ ಹೂಬಳ್ಳಿಗಳು, ತರತರದ ಮರಗಳು, ಬಗೆ ಬಗೆಯ ಹಣ್ಣು ಹಂಪಲಗಳು ದೊರೆಯುತ್ತಿದ್ದು ಬಹು ರಮ್ಯವಾಗಿ ಕಂಗೊಳಿಸುತ್ತಿದ್ದಿತೆಂದು ತಿಳಿದು ಬರುವುದು. ಮರಗಳ ಮೇಲೆ ಕುಳಿತು ಕೂಗುವ ಕೋಗಿಲೆಗಳಿಂದಲೂ, ಮೋಡಗಳ ಹಿಂಡು ಕಂಡು ಹರುಷದಿಂದ ಗರಿಗೆದರಿ ನರ್ತಿಸುವ ನವಿಲುಗಳಿಂದಲೂ. ನಿಬಿಡಾದ ಮರಗಳ ರೆಂಬೆಯಲ್ಲಿ ಕುಳಿತು ಕಲರವ ಗೈಯುವ ಹಕ್ಕಿ ಪಕ್ಕಿಗಳ ಇಂಚರ ಸ್ವರದಿಂದಲೂ, ಅರಣ್ಯ ಆಶ್ರಮಗಳಲ್ಲಿ ವೇದಮಂತ್ರಗಳನ್ನು ಪಠಿಸುತ್ತಿರುವ ಮುನಿಪೋತ್ತಮರ ಹಾಗೂ ಅವರ ವಟುಗಳ ಸ್ವರಮಾಧುರ್ಯದಿಂದಲೂ ಪೂರ್ವಕಾಲದಲ್ಲಿ ಶ್ರೀಶೈಲ ಶೋಭಿಸುತ್ತಿತ್ತೆಂದು ತಿಳಿದು ಬರುವುದು. ಶ್ರೀವೃಕ್ಷ, ಕಪಿತ್ಥ, ಪಾರಿಜಾತ. ಔದುಂಬರ, ಮಲ್ಲಿಗೆ, ಮಂದಾರ, ಮಾಲತಿ, ಮಾಧವಿ, ಮಾಮರ ಮೊದಲಾದ ಮರ-ಲತೆಗಳ ಸುಗಂಧ ಪುಷ್ಪ ಪರಿಮಳವನ್ನು ಮಂದ

ಮಂದವಾಗಿ ಬೀಸುವ ತಂಗಾಳಿಯು ಶ್ರೀಶೈಲದ ತುಂಬೆಲ್ಲ ಹಂಚುತ್ತಿತ್ತೆಂದೂ ಐತಿಹ್ಯ. ಅರಣ್ಯವನದಲ್ಲಿ ವೇದಾಧ್ಯಯನದಲ್ಲಿ ನಿರತರಾದ ಋಷಿಗಳೂ, ಶಿವಧ್ಯಾನದಲ್ಲಿ ಆಸಕ್ತರಾದ ಭಕ್ತರೂ ನಿರಾಹಾರಿಯಾಗಿ ನಿಂತು ತಪಸ್ಸು ಮಾಡುವ ಕರ್ಮಯೋಗಿಗಳೂ ಅಲ್ಲಲ್ಲಿ ಸಿಗುತ್ತಿದ್ದರೆಂದು ಕಂಡು ಬರುವುದು. ಇವೆಲ್ಲ ವರ್ಣನಾತೀತ ಪರಿಸರಗಳು ಈಗ ಅಷ್ಟೊಂದು ಗಡುಚಾಗಿ ಕಂಡು ಬರದಿದ್ದರೂ, ಹಿಂದಿನ ಪಳಿಯುಳಿಕೆಯು ಕುರುಹಾಗಿ ಸೃಷ್ಟಿಸೌಂದರ್ಯ, ಆಸಕ್ತರ ಭಾವನೆಯನ್ನು ಕೆದುರಿಸುವ ಪಾವನ ಪರಿಸರ, ದೈವೀ ಶಕ್ತಿಯ ಕುರುಹು. ಇವೆಲ್ಲ ಈಗಲೂ ಅಲ್ಪ ಮಟ್ಟಿಗಾದರೂ ಶ್ರೀಶೈಲದಲ್ಲಿ ಸಿಗುವ ವೆಂಬುದಕ್ಕೆ ಎರಡಿಲ್ಲ. ಶ್ರೀಶೈಲ ಬನದಲ್ಲಿ ಹರಿಯುವ ತೊರೆಗಳು, ಝರಿಗಳು ಅಸಂಖ್ಯ. ಅಲ್ಲಲ್ಲಿ ಮಡುಗಟ್ಟಿ ನಿಂತ ಹೊಕ್ಕರಣೆಗಳೂ ಉಂಟು.

## ಬ) ಭೌಗೋಲಿಕ ತಿಳುವಳಿಕೆ

ಶ್ರೀಶೈಲವು ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯ ನಂದಿಕೋಟನೂರು ತಾಲೂಕಿನಲ್ಲಿದೆ. ಕರ್ನೂಲಿನಿಂದ ಸುಮಾರು ೨೦೦ ಕಿ. ಮಿ, ದೂರದಲ್ಲಿ ಕರಿಯ ಬೆಟ್ಟದ ಮೇಲಿದೆ. ಇದರ ಸುತ್ತಲೂ ಸುಮಾರು ೫೦ ಕಿ. ಮಿ. ಅಂತರದಲ್ಲಿ ಊರುಗಳೇ ಇಲ್ಲ. ಲಂಬಾಣಿ ತಾಂಡೆಗಳು ಮಾತ್ರ ಅಲ್ಲಲ್ಲಿ ಕಾಣುವವು. ಶ್ರೀಶೈಲದ ಭೂಭಾಗದ ಅಳತೆಯು ಸುಮಾರು ೫೦ ಕಿ. ಮಿ. ಎಂದು ಹೇಳುವರು. ಇದಕ್ಕೆ ನಾಲ್ಕು ದಿಕ್ಕುಗಳಿಗೆ ನಾಲ್ಕು ಮಹಾದ್ವಾರಗಳಿರುವವು. ಪೂರ್ವದಲ್ಲಿ ತ್ರಿಪುರಾಂತಕವೆಂದು ಕರ್ನೂಲ ಜಿಲ್ಹೆಯ ಮಾರ್ಕಾಪೂರ ತಾಲೂಕಿನಲ್ಲಿ, ಉತ್ತರ ಹಾಗೂ ಪಶ್ಚಿಮ ದ್ವಾರಗಳು ತೆಲಂಗಾಣದಲ್ಲಿ, ದಕ್ಷಿಣ ದ್ವಾರವು ಕರ್ನೂಲ ಪಟ್ಟಣದಲ್ಲಿ, ಶ್ರೀಶೈಲ ಪರ್ವತವು ಸಮುದ್ರ ಪಾತಳಿಯಿಂದ ೧೫೦೦ ಅಡಿ ಎತ್ತರದಲ್ಲಿದೆ. ಇಲ್ಲಿಯ ಬೆಟ್ಟಗಳ ಮೇಲೆ ದರಿಕೊಳ್ಳಗಳ ಪರಿಸರದಲ್ಲಿ ಅತ್ಯದ್ಭುತ ಶಕ್ತಿಯನ್ನೂ, ಮನೋನಿಗ್ರಹವನ್ನುಂಟು ಮಾಡುವ ಔಷಧಯುಕ್ತ ಗಿಡಗಳೂ, ಕಂದ ಮೂಲಗಳೂ, ಕಲ್ಲು, ಹೂಗಳೂ, ಈಗಲೂ ಲಭ್ಯವೆಂದು ತಿಳಿದು ಬರುವುದು. ಅಲ್ಲದೆ; ಶಿಲಾಜಿತ, ಸ್ಫಟಿಕ, ಲೋಹ, ಅಭ್ರಕ ಮೊದಲಾದ ಧಾತುಗಳು ಸಿಗುವವೆಂದು ಪ್ರತೀತಿ, ಈ ಎಲ್ಲ ಧಾತು ಸಮೂಚ್ಚಯಗಳ ಮೇಲೆ ಹಾಯ್ದು

ಬರುವ ತಂಗಾಳಿಯು ಆಲ್ಹಾದವನ್ನುಂಟು ಮಾಡುವುದು. ಇಲ್ಲಿ ಸಂಜೀವಿನಿ ಔಷಧವೂ ಸಿಗುವದೆಂದು ಪ್ರತೀತಿ. ಶ್ರೀಶೈಲ ಪರ್ವತಕ್ಕೆ, ಗಿರಿ ಎಂದೂ ಶ್ರೀನಗರವೆಂದೂ, ಶ್ರೀಪರ್ವತವೆಂದೂ, ಕ್ರೌಂಚಗಿರಿಯೆಂತಲೂ ಕರೆದಿರುವರು,

ಕಾಶೀ ಕ್ಷೇತ್ರದಲಿ ಮರಣ ಸಂಭವಿಸಿದರೆ ಮುಕ್ತಿಯೆಂದೂ, ಅರುಣಾಚಲ ಕ್ಷೇತ್ರದ ಸ್ಮರಣ ಮಾತ್ರದಿಂದ ಮೋಕ್ಷವೆಂತಲೂ, ಶ್ರೀಶೈಲ ಶಿಖರವನ್ನು ನೋಡಿದ ಮಾತ್ರಕ್ಕೆ ಪುನರ್ಜನ್ಮವಿಲ್ಲವೆಂದೂ, ಎಂಬ ಮಾತೊಂದುಂಟು.

"ಕಾಶ್ಯಾಂತೆ ಮರಣಾನ್ಮುಕ್ತಿಃ
ಸ್ಮರಣದರುಣಾಚಲೆ
ದರ್ಶನಾದಿವ ಶ್ರೀಶೈಲೆ॥"
"ಶ್ರೀಶೈಲ ಶಿಖರಂ ದೃಷ್ಟ್ವಾ
ಪುನರ್ಜನ್ಮ ನವಿದ್ಯತೆ" ॥

### ಕ) ಸ್ಥಳ ಪುರಾಣ :

ಪ್ರತಿಯೊಂದು ಕ್ಷೇತ್ರಕ್ಕೂ ಪೌರಾಣಿಕ ನೆಲೆಗಟ್ಟು ಪ್ರಾಧಾನ್ಯ. ಮಾನವ ಜೀವನಕ್ಕೆ ಸಂಬಂಧವಿದ್ದುದು ಸ್ಥಳ ಪುರಾಣ. ಸನಾತನ ಧರ್ಮಾನುಯಾಯಿಗಳು ತಮ್ಮ ನಿತ್ಯ ಪೂಜಾ ವಿಧಾನದಲ್ಲಿ, ಷೋಡಶಕರ್ಮಾನುಷ್ಠಾನದಲ್ಲಿ, ತರ್ಪಣಾದಿ ಕಾರ್ಯದಲ್ಲಿ, ಹೀಗೆ ಅನೇಕ ಸಂದರ್ಭದಲ್ಲಿ ಸಂಕಲ್ಪವನ್ನು ಮಾಡುವ ಕಾಲಕ್ಕೆ ಶ್ರೀಶೈಲವನ್ನು ಸ್ಮರಣ ಮಾಡಿ ಸಂಕಲ್ಪವನ್ನು ಮಾಡುವರು. ತಾವು ಯಾವ ದಿಕ್ಕಿನಲ್ಲಿ ಇರುವೆವೆಂದು ಹೇಳಿಕೊಳ್ಳಬೇಕಾಗುವುದು. ಹೀಗಾಗಿ ಶ್ರೀಶೈಲಕ್ಕೆ ವಿಶೇಷ ಮಹತ್ವ.

"ಶ್ರೀಶೈಲ ಶಿಖರೇಶ್ವರಂ ಗಣಪತಿಂ ಶ್ರೀ ಹಟಕೇತಕಂ ಪುನಃ ।
ಸಾರಂಗೇಶ್ವರಂ ಬಿಂದು ತೀರ್ಥಂ ಮಾಮರಂ ಘಟಾರ್ಕಸಿದ್ಧೇಶ್ವರಂ ॥
ಗಂಗಾ ಶ್ರೀ ಭ್ರಮರಾಂಬಿಕಾಂ ಗಿರಿಜಾಸುತಾ ಮಾರಮಾ ವಿಶ್ವೇಶ್ವರಃ ।
ಶಂಖ ಚಕ್ರಂ ವರಾಹ ತೀರ್ಥಮನಿಷಂ ಶ್ರೀಶೈಲನಾಥಂಭಜೆ" ॥

ಶ್ರೀಶೈಲ ಕ್ಷೇತ್ರದಲ್ಲಿ ಈಶ್ವರ ಲಿಂಗವಿದೆ. ಇದು ಸ್ವಯಂಭೂ ಲಿಂಗ. ಈ ಕ್ಷೇತ್ರದಡಿಯಲ್ಲಿ ಸಾವಿರಾರು ಲಿಂಗಗಳು ಉದ್ಭವಿಸಿವೆ ಎಂದು ಸ್ಕಂದ ಪುರಾಣದಿಂದ ತಿಳಿದು ಬರುತ್ತದೆ.

ಶ್ರೀಶೈಲವನ್ನು ಕುರಿತು ಅದೆಷ್ಟೋ ಪೌರಾಣಿಕ ಹಿನ್ನೆಲೆಗಳುಂಟು. ಅವುಗಳಲ್ಲಿ ಕೆಲವನ್ನು ಇಲ್ಲಿ ವರ್ಣಿಸಲಾಗಿದೆ.

"ಶ್ರೀಶೈಲ ಶೃಂಗೇ ವಿವಧ ಪ್ರಸಂಗೆ ಶೇಷಾದ್ರಿ ಶೃಂಗೇಪಿ ಸದಾವನಂತಮ್ ।
ತಮರ್ಜುನಂ ಮಲ್ಲಿಕ ಪೂರ್ವಮೇನಂ ನಮಾಮಿ ಸಂಸಾರ ಸಮುದ್ರ-
ಸೇತುಮ್ ॥

— ಆದಿ ಶಂಕರಾಚಾರ್ಯ

ಈ ಪರ್ವತ ಪ್ರದೇಶದಲ್ಲಿ ಭಗವಾನ್ ಶಂಕರನು ಅನೇಕ ಪ್ರಸಂಗಗಳಲ್ಲಿ ಬಂದಿದ್ದಲ್ಲದೆ ಕೊನೆಗೆ ಜ್ಯೋತಿರ್ಲಿಂಗ ರೂಪದಲ್ಲಿ ಇಲ್ಲಿಯೇ ನೆಲೆನಿಂತನೆಂದು ಪ್ರತೀತಿ. ಆದಕ್ಕೆಂದೇ ಈ ಸ್ಥಳವನ್ನು ದಕ್ಷಿಣಕಾಶಿಯೆಂದು ಕರೆಯುವರು.

೧) ಶಂಕರನ ಪುತ್ರನಾದ ಕಾರ್ತಿಕೇಯನು ತಾಯಿಯ ಮೇಲೆ ಸಿಟ್ಟಾಗಿ ಮನೆಯನ್ನು ಬಿಟ್ಟು ಹೋದನು. ಆತನ ಸಂಶೋಧನೆಗಾಗಿ ಪಾರ್ವತಿಯು ಕಾಡುಮೇಡುಗಳನ್ನು ಅಲೆಯುತ್ತ ಈ ಕದಳೀ ಬನಕ್ಕೆ (ಶ್ರೀಶೈಲಕ್ಕೆ) ಬರಲು ಕಾರ್ತಿಕೇಯನು ಸಿಕ್ಕನು. ಆಗ ಪಾರ್ವತಿಯು ಅಲ್ಲಿಯ ಆದಿವಾಸಿ ಜನರಲ್ಲಿ ಕೂಡಿಕೊಂಡು ಅಲ್ಲಿಯೇ ನೆಲಸಿದಳು.

ಇತ್ತ ಮಹಾದೇವನು ಪಾರ್ವತಿ ಮತ್ತು ಕಾರ್ತಿಕೇಯರು ಇವರೀರ್ವರೂ ಇರದ್ದನ್ನು ಕಂಡು ಅಸ್ವಸ್ಥನಾಗಿ ಪಾರ್ವತಿಯನ್ನು ಹುಡುಕಲು ಕೈಲಾಸವನ್ನು ಬಿಟ್ಟು ಅಲೆಯುತ್ತಲೆಯುತ್ತ ಕದಳೀ ಬನಕ್ಕೇ ಬಂದನು. ಅಲ್ಲಿ ಆದಿವಾಸಿ ಸ್ತ್ರೀಯರಲ್ಲಿ ಅತಿ ಸುಂದರಳಾದ ಭಿಲ್ಲಣಿಯನ್ನು ಕಂಡು ಪ್ರೇಮಂಕುರಿಸಿತು. ಆ ಭಿಲ್ಲಣಿಯು ನೃತ್ಯ ಗಾಯನ ಹಾಗೂ ನೇತ್ರ ಕಟಾಕ್ಷದಿಂದ ಭೋಳಾ ಶಂಕರನನ್ನ ಮರುಳು ಮಾಡಿದಳು. ಮರುಳು

ಮಾಡಿದ ಸ್ತ್ರೀಯೇ ಪಾರ್ವತಿ. ಈ ಭಿಲ್ಲಿಣಿ ಕನ್ನೆಯೊಂದಿಗೆ ಮಹಾದೇವನ ಮದುವೆಯನ್ನು ಆ ಆದಿವಾಸಿ ಜನರು ಜರುಗಿಸಿದರು. ಮತ್ತು ಅವರೀರ್ವರು ಆ ಕದಳೀ ಬನದಲ್ಲಿ ವಾಸಿಸುವಂತೆ ಆಗ್ರಹ ಪಡಿಸಿದರು. ಆ ಆದಿವಾಸಿ ಭಕ್ತರ ಪ್ರೇಮ ಪೂರಿತ ಅಪೇಕ್ಷೆಯ ಮೇರೆಗೆ ಭಗವಾನ್ ಶಂಕರನು ಈ ದಕ್ಷಿಣ ಕಾಶಿಯಲ್ಲಿ ನೆಲೆಸಿದನು.

೨) ಬಹು ಪೂರ್ವಕಾಲದಲ್ಲಿ ಶಿಲಾದನೆಂಬ ಋಷಿ ಇದ್ದನು. ಮಕ್ಕಳಿಲ್ಲದ್ದರಿಂದ ಶಿವನನ್ನು ಕುರಿತು ತಪಸ್ಸು ಮಾಡಿ ಇಬ್ಬರು ಗಂಡು ಮಕ್ಕಳನ್ನು ಪಡೆದನು. ಒಬ್ಬನು ನಂದೀಶ್ವರನೆಂದೂ ಮತ್ತೊಬ್ಬನು ಪರ್ವತನೆಂದು ಹೆಸರು. ಒಮ್ಮೆ ಅವರೀರ್ವರೂ ತಪಸ್ಸು ಮಾಡಿ ಪರಮೇಶ್ವರನನ್ನು ಒಲಿಸಿಕೊಂಡು, 'ದೇವಾ ನಾನು ನಿನ್ನ ವಾಹನವಾಗಿ ಸತತವೂ ನೀನು ನನ್ನ ಮೇಲೆ ಕೂತಿರಬೇಕೆಂದು' ನಂದಿಯು ಬೇಡಿಕೊಂಡರೆ ; ಪರ್ವತನು, 'ದೇವಾ ನೀ ಕೈಲಾಸ ಪರ್ವತವನ್ನು ಬಿಟ್ಟು ನನ್ನಲ್ಲಿ ಬಂದು ನೆಲೆಸಬೇಕೆಂದು' ಬೇಡಿಕೊಂಡನು. ಈಶ್ವರನು ಅವರೀರ್ವರ ಅಭೀಷ್ಟವನ್ನು ನೆರವೇರಿಸಿದನು. ಹೀಗಾಗಿ, ನಂದಿಯು ನಂದೀಶ್ವರ ಬೆಟ್ಟವೆಂದೂ, ನಂದೀಮಂಡಲವೆಂದೂ ಕರೆಯಲ್ಪಟ್ಟಿರುವುದು. ಈ ಸ್ಥಳವು ಶ್ರೀಶೈಲದಿಂದ ನೈಋತ್ಯಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಪರ್ವತನು ಪರ್ವತ ಲಿಂಗವೆಂದು ಹೆಸರನ್ನು ಹೊತ್ತುಕೊಂಡು ಶ್ರೀಶೈಲ ಪರ್ವತನಾದನು. ಈ ಪರ್ವತ ಶಿಖರವನ್ನು ನೋಡಿದವರಿಗೆ ಮೋಕ್ಷ ದೊರೆಯಲೆಂಬ ಅನುಗ್ರಹವೂ ದೊರೆಯಿತು. ಇಂತು ಈ ಈರ್ವರ ಭಕ್ತರ ಕೃಪೆಯಿಂದ ಈಶ್ವರನು ಕೈಲಾಸದಿಂದ ಬಂದು ಶ್ರೀಶೈಲದಲ್ಲಿ ನೆಲೆಸಿದನೆಂದು ಐತಿಹ್ಯ.

೩) ಪರ್ವತನೆಂಬ ಶಿವಭಕ್ತನ ಸಾಹಸದಿಂದ ಶ್ರೀಶೈಲವೆಂದು ಕರೆಯಲ್ಪಟ್ಟಿತಷ್ಟೆ ! ಶೈಲ ಅಂದರೆ ಪರ್ವತ. ಶ್ರೀಶೈಲದ ಹಿಂದೆ 'ಶ್ರೀ' ಎಂಬುದು ಹೇಗೆ ಬಂದಿತೆಂಬುದರ ಬಗ್ಗೆ ಈ ತೆರನಾದ ಐತಿಹ್ಯ.

ಕೃತಯುಗದಲ್ಲಿ ವಸುಮತಿ ಎಂಬ ಕನ್ಯೆಯು ಈ ಪರ್ವತದ ಮೇಲೆ ಕುಳಿತು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡಳಂತೆ, ಆಗ ಅವಳು,

"ಪ್ರಭೋ, ವಸುಮತಿ ಎಂಬ ನನ್ನ ಹೆಸರಿನ ಶಬ್ದವನ್ನು ತೆಗೆದು 'ಶ್ರೀ' ಎಂದು ಹೆಸರಿಟ್ಟು ಆ 'ಶ್ರೀ'ಯನ್ನು ಹಿಂದೆ ಜೋಡಿಸಿ ಈ ಪರ್ವತವು ಶ್ರೀಶೈಲವಾಗಲಿ." ಎಂದು ಬಿನ್ನವಿಸಿಕೊಂಡಳಂತೆ. ಶಿವನು ಅವಳ ಅಪೇಕ್ಷೆ-ಯಂತೆ ಶ್ರೀಶೈಲವೆಂದು ಕರೆಯಲು ಅನುಗ್ರಹಿಸಿದನಂತೆ. ಇದನ್ನು ಶ್ರೀಶೈಲ ವೆಂದು ಕರೆದಿರುವರು.

೪. ಪೂರ್ವಕಾಲದಲ್ಲಿದ್ದ ಚಂದ್ರಗುಪ್ತ ರಾಜನಿಗೆ ಸುಂದರಿಯಾದ ಚಂದ್ರಮತಿ ಎಂಬ ಮಗಳಿದ್ದಳು. ಅವಳು ತನ್ನ ಮದುವೆಯ ವಿಷಯದಲ್ಲಿ ಆಸಕ್ತಳಾಗಿರದೆ ಸದಾಕಾಲವೂ ಶಿವಧ್ಯಾನದಲ್ಲಿ ನಿರತಳಾಗಿದ್ದಳು; ಮಲ್ಲಿಕಾ ಕುಸುಮ ಮಾಲೆಯನ್ನು ಮಾಡಿ ತೊಡಿಸಿ ಪರ್ವತ ಲಿಂಗವನ್ನು ಪೂಜಿಸು ತ್ತಿದ್ದಳು. ಅವಳ ಭಕ್ತಿಗೆ ಮೆಚ್ಚಿ ಈಶ್ವರನು ಪ್ರತಕ್ಷನಾಗಿ ; ನಿನ್ನ ಬಯಕೆ ಏನೆಂದು ಕೇಳಲು ; "ದೇವಾ ನೀನು ಶಿರದಲ್ಲಿ ಚಂದ್ರನನ್ನು, ಜಟೆಯಲ್ಲಿ ಗಂಗೆಯನ್ನು ಧರಿಸಿದಂತೆ ಈ ನನ್ನ ಮಲ್ಲಿಕಾ ಕುಸುಮಗಳ ಮಾಲೆಯನ್ನು ನಿನ್ನ ಕೊರಳಲ್ಲಿ ಅನುವರತವೂ ಧರಿಸೆಂಬ ನನ್ನ ಬೇಡಿಕೆಯನ್ನು ಪೂರೈಸಿ ಅನುಗ್ರಹಿಸು." ಎಂದು ಬೇಡಿಕೊಂಡಳು. ಅವಳ ಅಪೇಕ್ಷೆಯಂತೆ ಶಿವನು ಇಲ್ಲಿ ಮಲ್ಲಿಕಾರ್ಜುನನಾಗಿ ನಿಂತನು. ನಂತರ ಶಿವನು ; " ಭ್ರಮರ ಕೀಟ ನ್ಯಾಯದಿಂದ ಭಕ್ತರನ್ನು ನೀನು ನೋಡುತ್ತ ಇಲ್ಲಿ ಪ್ರಸಿದ್ಧಳಾಗಿ ನನ್ನನ್ನು ಮದುವೆಯಾಗು " ಎಂದು ಅವಳಿಗೆ ಅಭಯವಿತ್ತನು. ಈ ಸಂಗತಿಯು ಸ್ಕಂದ ಪುರಾಣದಿಂದ ತಿಳಿದು ಬರುತ್ತದೆ.

೫. ದ್ವಾಪರಯುಗದಲ್ಲಿ ಪಾಂಡವರು ವನವಾಸದ ಸಮಯದಲ್ಲಿ ಈ ಶ್ರೀಶೈಲ ಪರ್ವತಕ್ಕೆ ಬಂದಾಗ ; ಮಹಾಶಿವ ಭಕ್ತನಾದ ಅರ್ಜುನನು ಪರ್ವತ ಲಿಂಗವನ್ನು ಮಲ್ಲಿಗೆಯ ಹೂಗಳಿಂದ ಅನನ್ಯ ಭಕ್ತಿಯಿಂದ ಪೂಜಿಸಿದ ನಿಮಿತ್ತ ಈ ಈಶ್ವರ ಲಿಂಗಕ್ಕೆ ಅರ್ಜುನನ ಹೆಸರನ್ನು ಜೋಡಿಸಿ ಮಲ್ಲಿಕಾರ್ಜುನ ಲಿಂಗವೆಂದು ಕರೆಯಲ್ಪಟ್ಟಿತ್ತೆಂದೂ ಐತಿಹ್ಯ. ಅರ್ಜುನವೆಂಬ

ಪದಕ್ಕೆ 'ಬಿಳುಪು' ಎಂದು ಅರ್ಥ. ಬಿಳಿಯ ಮಲ್ಲಿಗೆಯ ಮಾಲೆಯಿಂದ ಅಲಂಕೃತನಾದ್ದರಿಂದ ಈ ಲಿಂಗವನ್ನು ಮಲ್ಲಿಕಾರ್ಜುನ ಲಿಂಗವೆಂದು ಕರೆದಿರಲೂ ಸಾಕು.

೬. ಆದಿ ಶಂಕರಾಚಾರ್ಯರು ಈ ಕ್ಷೇತ್ರದಲ್ಲಿದ್ದಾಗ ಘಟನೆಯೊಂದು ಜರುಗಿತೆಂದು ತಿಳಿದು ಬರುವುದು. ಶ್ರೀಶೈಲ ಪ್ರಾಂತದಲ್ಲಿ ಕಾಪಾಲಿಕರೆಂಬ ಒಂದು ವಿಧವಾದ ಶಿವಭಕ್ತರಿದ್ದರು. ಅವರು ಕಾಪಾಲಿಕಾ ವ್ರತದಿಂದ ಶಿವನನ್ನು ಆರಾಧಿಸುತ್ತಿದ್ದರು. ನರಬಲಿಯೇ ಅವರ ಪ್ರಧಾನ ಪೂಜೆ. ಹೀಗಾಗಿ ಅವರು ಓರ್ವ ತೇಜಸ್ವಿ ಯುವಕನನ್ನು ತಂದು ಶಿವನಿಗೆ ಬಲಿಕೊಡುವ ಪರಿಪಾಠವನ್ನಿಟ್ಟು ಕೊಂಡಿದ್ದರು. ಒಮ್ಮೆ ಮಹಾ ತಪಸ್ವಿಯಾದ ಆದಿ ಶಂಕರಾಚಾರ್ಯರನ್ನು ಕಂಡು ಒಳ್ಳೇ ಸಂತೋಷವಾಯಿತವರಿಗೆ. ಧ್ಯಾನಾಸಕ್ತರಾಗಿ ಕುಳಿತ ಶಂಕರಾಚಾರ್ಯರಲ್ಲಿ ಬಂದು ನಿಂದರು. ಸಮಾಧಿಯಿಂದ ಎಚ್ಚತ್ತ ನಂತರ; "ಮಾನ್ಯರೆ, ನಿಮ್ಮಂತಹ ತೇಜಸ್ವಿ ಪುರುಷರನ್ನಾಗಲಿ ಮಹಾ ತಪಸ್ವಿಯನ್ನಾಗಲಿ, ಭೂಪತಿಯನ್ನಾಗಲಿ ನಾವು ಆರಾಧಿಸುವ ಶಿವನಿಗೆ ಬಲಿಯನ್ನಿತ್ತು ನಮ್ಮಿಷ್ಟಗಳನ್ನು ನೆರವೇರಿಸಿ ಕೊಳ್ಳುವೆವು. ತಾವು ಬಂದು ಬಲಿಗೆ ಸಿದ್ಧರಾಗಿ ನಮ್ಮ ಅಭೀಷ್ಟವನ್ನು ನೆರವೇರಿಸಿ ಕೊಡಬೇಕಾಗಿ ಎಂದು ತಮ್ಮಲ್ಲಿ ಬೇಡಿಕೊಳ್ಳುವೆವು." ಎಂದು ಕಾಪಾಲಿಕರು ನುಡಿದರು. ಆಗ ಶಂಕರಾಚಾರ್ಯರು, ಕಿರುನಗೆ ಬೀರುತ್ತ; "ಕಾಪಾಲಿಕರೇ, ನನ್ನದೇನು ಅಭ್ಯಂತರವಿಲ್ಲ ಪ್ರತಿರೋದವೂ ಇಲ್ಲ. ಆದರೆ ನನ್ನಶಿಷ್ಯರಿಂದ ನಿಮಗಾವ ಬಾಧೆಯುಂಟಾಗದಂತೆ, ನೀವೇ ಆತ್ಮರಕ್ಷಣೆ ಮಾಡಿಕೊಳ್ಳಬೇಕಾಗುವುದು." ಎಂದು ಹೇಳಿದರು. ಅವರ ಅನುಮತಿಯಿಂದ ಆಚಾರ್ಯರ ಶಿರವನ್ನು ಛೇದಿಸಲು ದ್ಯುಕ್ತರಾಗಲು ; ಅನತಿ ದೂರದಲ್ಲಿದ್ದ ಶಿಷ್ಯ ಪದ್ಮನಾಭರು ಸ್ಥಿತಿಯನ್ನರಿತು ಶ್ರೀ ಗುರುವಿನ ರಕ್ಷಣೆಗಾಗಿ ಶ್ರೀ ಲಕ್ಷ್ಮೀನೃಸಿಂಹ ಸ್ವಾಮಿಯನ್ನು ಪ್ರಾರ್ಥಿಸಿದರು. ಶ್ರೀ ಲಕ್ಷ್ಮೀನೃಸಿಂಹ ಸ್ವಾಮಿಯು ಪ್ರತ್ಯಕ್ಷನಾಗಿ ಆ ಕಾಪಾಲಿಕರನ್ನೆಲ್ಲ ಸಂಹಾರಮಾಡಿ ಶಂಕರಾಚಾರ್ಯರನ್ನು ರಕ್ಷಿಸಿದನಂತೆ. ಶ್ರೀ ಲಕ್ಷ್ಮೀನೃಸಿಂಹ ಸ್ವಾಮಿಯನ್ನು ಕಂಡು ಶಂಕರಾಚಾರ್ಯರು ಹರ್ಷಿತರಾಗಿ. "ಶ್ರೀ ಲಕ್ಷ್ಮೀ-ನೃಸಿಂಹ ಮಮದೇಹಿಕ ರಾವಲಂಬಂ" ಎಂಬ ಅಷ್ಟಕದಿಂದ ಸ್ತುತಿಸಿದರು.

ಶಂಕರಾಚಾರ್ಯರು ರಚಿಸಿದ "ಶಿವಾನಂದ ಲಹರಿ" ಎಂಬ ಸ್ತೋತ್ರ-ದಲ್ಲಿ ಶ್ರೀಶೈಲ ಕ್ಷೇತ್ರದ ಹಾಗೂ ಕ್ಷೇತ್ರದೊಡೆಯನ ಆಖ್ಯಾಯಿಕೆಯು ಬರುವದೆಂಬುದಕ್ಕೆ ಈ ಕೆಳಗಿನ ಸ್ತೋತ್ರಗಳೇ ಆಧಾರ.

## ಶ್ರೀ ಆದಿ ಶಂಕರಾಚಾರ್ಯರು



"ಸಂಧ್ಯಾರಂಭಂ ಪ್ರಜೃಂಭಿತಂ ಶೃತಿ ಶಿರಸ್ಥಾನಂತರಾಧಿಷ್ಠಿತಂ
ಸಪ್ರೇಮ ಭ್ರಮರಾಭಿರಾಮಮಸಕೃತ್ಸದ್ವಾಸನಾ ಶೋಭಿತಮ್
ಭೋಗೀಂದ್ರಾಭರಣಂ ಸಮಸ್ತ ಸುಮನಃ ಪೂಜ್ಯಂ ಗುಣಾವಿಷ್ಕೃತಂ"
ಸೇವೇ ಶ್ರೀಗಿರಿ ಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಮ್ ॥೧॥

"ಭೃಂಗೀಚ್ಛಾನಟನೋತ್ಕಟಃ ಕರಿಮದಗ್ರಾಹೀ ಸ್ಫುರನ್ಮಾಧವಾ
ಹ್ಲಾದೋ ನಾದಯುತೋ ಮಹಾಸಿತವಪುಃ ಪಂಚೇಷುಣಾಚಾದೃತಃ
ಸತ್ಪಕ್ಷಃ ಸುಮನೋವನೇಷು ಸಪುನಃ ಸಾಕ್ಷಾನ್ಮದೀಯೇ ಮನೋ
ರಾಜೀವೇ ಭ್ರಮರಾಧಿಪೋ ವಿಹರತಾಂ ಶ್ರೀಶೈಲವಾಸೀವಿಭುಃ" ॥೨॥

ಮೇಲಿನ ಶ್ಲೋಕಗಳನ್ನು ಗಮನಿಸಿದರೆ ಶಂಕರಾಚಾರ್ಯರು ಶ್ರೀಶೈಲದಲ್ಲಿ ಕೆಲಕಾಲವಿದ್ದು ಮಲ್ಲಿಕಾರ್ಜುನ ಲಿಂಗವನ್ನು ಪೂಜಿಸಿ ಶಿವಧ್ಯಾನ ದಲ್ಲಿ ನಿರತರಾಗಿದ್ದರೆಂಬುದಕ್ಕೆ ನಿದರ್ಶನ.

೭) ಕೃತಯುಗದಲ್ಲಿ ಹಿರಣ್ಯಕಶ್ಯಪನು ಶ್ರೀಶೈಲಕ್ಕೆ ಬಂದು ಮಲ್ಲಿಕಾರ್ಜುನ ಲಿಂಗವನ್ನು ಪೂಜಿಸಿದನಂತೆ. ತ್ರೇತಾಯುಗದಲ್ಲಿ ಶ್ರೀರಾಮ-ಚಂದ್ರನು ತನ್ನ ವನವಾಸ ಸಮಯದಲ್ಲಿ ಶ್ರೀಶೈಲಕ್ಕೆ ಬಂದು ಮಹಾಲಿಂಗ ವನ್ನು ಪೂಜಿಸಿದನಂತೆ. ದ್ವಾಪರ ಯುಗದಲ್ಲಿ ಪಾಂಡವರು ಬಂದು ಮಲ್ಲಿಕಾರ್ಜುನನ ದರ್ಶನ ಪಡೆದು ಧನ್ಯರಾದರಂತೆ. ಕಲಿಯುಗದಲ್ಲಿ ಆದಿ-ಶಂಕರಾಚಾರ್ಯರು, ನಾಗಾರ್ಜುನ ಮುಂತಾದವರು ಬಂದು ಮಲ್ಲಿಕಾರ್ಜುನ ನನ್ನು ಸ್ತುತಿಸಿ ತಪಸ್ಸಿದ್ಧಿಯನ್ನು ಪಡೆದು ಸ್ವಾಮಿಯ ಅನುಗ್ರಹಕ್ಕೆ ಪಾತ್ರರಾದರಂತೆ, ಬಸವೇಶ್ವರ, ಜ್ಞಾನೇಶ್ವರರ ತಂದೆ ವಿಠ್ಠಲಪಂತ ಮೊದಲಾದವರೂ ಅಲ್ಲಿಗೆ ಬಂದು ಹೋದ ಬಗೆ ಉಲ್ಲೇಖಗಳೂ ಲಭ್ಯ,

## ಐತಿಹಾಸಿಕ ಹಿನ್ನೆಲೆ :

ಪೂರ್ವಕಾಲದಲ್ಲಿ ಶ್ರೀಶೈಲವು ಒಳ್ಳೇ ವೈಭವದಿಂದ ಮೆರೆಯುತ್ತಿದ್ದಿ-ತೆಂದು ತಿಳಿದು ಬರುವುದು. ಕ್ರಿ. ಶ. ಪೂ. ಮೂರನೆ ಶತಮಾನದಲ್ಲಿ ಇಕ್ಷ್ವಾಕರ ಕಾಲದಲ್ಲಿ ಬೌದ್ಧ ಶೈವರ ಕಲಹದಿಂದ ನಷ್ಟವಾಯಿತೆಂದು ಹೇಳುತ್ತಾರೆ. ನಂತರ ಚಾಳುಕ್ಯರ ಕಾಲದಲ್ಲಿ ಪುನರುದ್ಧಾರವಾಗಿ ಅದ್ಭುತ ಅಭಿವೃದ್ಧಿಯನ್ನು ಹೊಂದಿತ್ತಂತೆ. ಆರನೆಯ ಶತಮಾನದಲ್ಲಿ ಕದಂಬವರ್ಮನು ಶ್ರೀಶೈಲದೊಳಗಿದ್ದ ಅರಣ್ಯ ರಾಜ್ಯಗಳನ್ನು ಆಕ್ರಮಿಸಿಕೊಂಡನೆಂದು ಶಾಸನ ಗಳಿಂದ ತಿಳಿದು ಬರುವುದು. ಶಾಲಿವಾಹನ ಶಕೆಯ ಆರಂಭದ ಪೂರ್ವದಲ್ಲಿ ನಾಗಾರ್ಜುನನು ಶ್ರೀಶೈಲದಲ್ಲಿ ವಾಸವಾಗಿದ್ದನೆಂದು ಬೌದ್ಧ ಶಾಸನವು ಹೇಳುತ್ತದೆ. ಶ್ರೀಗಿರಿಯನ್ನು ನಾಗಾರ್ಜುನ ಬೆಟ್ಟವೆಂತಲೂ ಕರೆಯುವ ರೂಢಿ. ನಾಗಾರ್ಜುನನ ಕಾಲದಲ್ಲಿ ಶ್ರೀಶೈಲಕ್ಷೇತ್ರವು ಇಂದ್ರನ ಅಮರಾವತಿ ಯಂತೆ ಮೆರೆಯುತ್ತಿತ್ತಂತೆ. ಆರನೆಯ ಶತಮಾನದಲ್ಲಿ ಶ್ರೀಶೈಲ ಪ್ರಾಂತ

ವನ್ನು, ಕದಂಬ ರಾಜರು ತಮ್ಮ ಸ್ವಾಧೀನ ಪಡಿಸಿಕೊಂಡರೆಂದು ತಿಳಿಯು ವುದು. ಹನ್ನೆರಡನೆಯ ಶತಮಾನದಲ್ಲಿ ಹೊಯ್ಸಳ ರಾಜನು ಪಾತಾಳ ಗಂಗೆಯಿಂದ ಲಿಂಗ ಶಿಲೆಯನ್ನು ತರಿಸಿದನೆಂದು ಶಾಸನಗಳು ತಿಳಿಸುವವು.

ವಿಜಯನಗರದ ರಾಜರು ಸಾಳ್ವವಂಶಜರಾಗಿದ್ದರೂ ಮಹಾ ಶಿವಭಕ್ತರು. ಶ್ರೀಶೈಲದ ಮೇಲೊಂದು ಕೆರೆಯನ್ನು ಕಟ್ಟಿಸಿದರಂತೆ. ಶ್ರೀಕೃಷ್ಣದೇವ ರಾಯನು ಕಳಿಂಗ ದೇಶವನ್ನು ಗೆದ್ದುಕೊಂಡು ಬರುವಾಗ ಶ್ರೀಶೈಲವನ್ನು ಸಂದರ್ಶಿಸಿ ಮಲ್ಲಿಕಾರ್ಜುನ ಲಿಂಗವನ್ನು ಪೂಜಿಸಿದನಂತೆ. ಮತ್ತು ಅಲ್ಲಿಯ ರಥ ಬೀದಿಯ ಇಕ್ಕೆಲುಗಳಲ್ಲಿ ಮಂಟಪಗಳನ್ನು ಕಟ್ಟಿಸಿ ಹಲವು ಗ್ರಾಮ ಗಳನ್ನು ಉಂಬಳಿಯಾಗಿ ಕೊಟ್ಟನೆಂದೂ ಇತಿಹಾಸದಿಂದ ತಿಳಿದು ಬರುತ್ತದೆ. ಶ್ರೀಕೃಷ್ಣದೇವರಾಯನ ಸಾಮಂತನಾದ ಚಂದ್ರಶೇಖರರಾಯನೆಂಬವನು ಶ್ರೀಶೈಲ ಪ್ರಾಂತಕ್ಕೆ ಅಧಿಪತಿಯಾದ ನಂತರ ಶ್ರೀಮಲ್ಲಿಕಾರ್ಜುನ ಸ್ವಾಮಿಗೆ ಸುವರ್ಣ ನಂದಿಯೊಂದನ್ನು ಉಡುಗರೆಯಾಗಿ ಕೊಟ್ಟನೆಂದು ತಿಳಿದು ಬರುವುದು.

ಮಲ್ಲಿಕಾರ್ಜುನ ದೇವಾಲಯದ ಪರಿಸರದಲ್ಲಿ ಮಹಾದ್ವಾರಗಳನ್ನು, ಆಲಯಗಳನ್ನು ಕ್ರಿ. ಶ. ೧೪೦೪ ರಲ್ಲಿ ಪ್ರಭುದೇವರಾಯನೆಂಬ ಅರಸನು ಸ್ವಾಮಿಯ ಸಂದರ್ಶನ ಸಮಯದಲ್ಲಿ ಬಂದಾಗ ಕಟ್ಟಿಸಿದನೆಂದು ಶಿಲಾಶಾಸನ-ಗಳು ಹೇಳುತ್ತವೆ.

ವಿಜಯನಗರ ಸಾಮ್ರಾಜ್ಯವು ಪತನವಾದ ನಂತರ ಶ್ರೀಶೈಲ ದೇವಸ್ಥಾನವು ಕ್ಷೀಣಾವಸ್ಥೆಗೆ ಬಂದಿತೆಂದು ತಿಳಿದು ಬರುವುದು. ೧೮ ನೇ ಶತಮಾನದಲ್ಲಿ ಮುಲ್ಲಾವತ್ ಖಾನನೆಂಬವನು ಆಳುವ ಸಮಯದಲ್ಲಿ ಕಳ್ಳ-ಕಾಕರು ದೇವಾಲಯವನ್ನು ಮುತ್ತಿ ದಾಳಿ ಮಾಡಿದರೆಂದು ತಿಳಿದುಬರುವುದು.

ಛತ್ರಪತಿ ಶಿವಾಜಿ ಮಹಾರಾಜನು ಈ ಜ್ಯೋತಿರ್ಲಿಂಗದ ದರ್ಶನಾರ್ಥಿ ಯಾಗಿ ಬಂದು ಆ ಸಮಯದಲ್ಲಿ ಈ ಮಂದಿರದ ಉತ್ತರದಲ್ಲಿ ಒಂದು ಭವ್ಯ ಗೋಪುರವನ್ನು ಕಟ್ಟಿಸಿದ್ದಲ್ಲದೆ, ಅನ್ನಛತ್ರವಂದನ್ನು ತೆಗೆದನಂತೆ. ಗೋಪುರದ

ಮೇಲೆ "ದೇವಿಯು ಶಿವಾಜಿಯ ಕೈಯಲ್ಲಿ ಖಡ್ಗವನ್ನು ಕೊಟ್ಟಳು" ಎನ್ನುವ ಕೆತ್ತನೆಯುಂಟು. ದತ್ತಾವತಾರಿ ಶ್ರೀ ನೃಸಿಂಹ ಸರಸ್ವತಿಯವರು ಶ್ರೀಶೈಲ ಯಾತ್ರೆಯನ್ನು ಮಾಡಿ ಇಲ್ಲಿಯ ಪಾತಾಳ ಗಂಗೆಯಲ್ಲಿ ಹೂಗಳ ಆಸನದ ಮೇಲೆ ಕುಳಿತು ತಮ್ಮ ಅವತಾರವನ್ನು ಸಮಾಪ್ತಗೊಳಿಸಿದರೆಂದು ಗುರು ಚರಿತ್ರೆಯಿಂದ ತಿಳಿದು ಬರುವುದು.

ಹುಯನ್‌ತ್ಸಾಂಗ ಎಂಬ ಪರದೇಶಿ ಯಾತ್ರಿಕನು ಈ ಕ್ಷೇತ್ರವನ್ನು ಸಂದರ್ಶಿಸಿದ ಬಗ್ಗೆ ಬೌದ್ಧ ಚೀನೀ ಪ್ರಶಾಸನದಲ್ಲಿ ಉಲ್ಲೇಖವಿರುವುದು.

೮) ಶ್ರೀಶೈಲವು ಶಿವನ ಅಷ್ಟ ಪೀಠಗಳಲ್ಲಿ ಒಂದು. ಅದಕ್ಕೆಂದೇ ದೇವಿಯ ಹದಿನೆಂಟು ಶಕ್ತಿ ಪೀಠಗಳಲ್ಲಿ ಒಂದು ಶಕ್ತಿ ಪೀಠವೂ ಇಲ್ಲಿದೆ. ಶಿವ ಮತ್ತು ಶಕ್ತಿಗಳ ಸಂಗಮದಿಂದಾಗಿ ಈ ಕ್ಷೇತ್ರಕ್ಕೆ ಮಹತ್ವ ಬಂದಿದೆ. ಇಲ್ಲಿ ದೇವಿ(ಶಕ್ತಿ)ಯನ್ನು ಮಾಧವಿ ಎಂದೂ, ಭ್ರಮರಾಂಬಾ ಎಂದೂ ಕರೆಯುವರು. ಇವೆಲ್ಲ ಕಾಲಿಮಾತೆಯ ಒಂದೊಂದು ರೂಪ. ಮಹಿಷಾಸುರನ ಜೊತೆ ಯುದ್ಧ ಮಾಡುವ ಸಮಯದಲ್ಲಿ ಭೃಂಗಗಳುಳ್ಳ ಕಮಲ ಪುಷ್ಪಗಳ ಮಾಲೆಯನ್ನು ಹಾಕಿಕೊಂಡು ಅಸುರನನ್ನು ವಧಿಸಿದ್ದರಿಂದ ಅವಳನ್ನು ಭ್ರಮರಾಂಬಾ ಎಂದು ಕರೆಯುವರು. ಈ ದೇವಿಯ ಮೂಲ ನಿವಾಸವು ಕರ್ನಾಟಕವಂತೆ. ಇವಳು ಧನಗರ ಜನಾಂಗದ ಕುಲದೇವತೆ. ಭ್ರಮರಾಂಬಾ ದೇವಿಯ ಸನ್ನಿಧಾನದಲ್ಲಿ ಚೈತ್ರೋತ್ಸವವು ಜರುಗುವ ಸಂದರ್ಭದಲ್ಲಿ ಈ ಪ್ರಾಂತದ ಜನರು ತಮ್ಮ ಹೆಣ್ಣು ಮಕ್ಕಳಿಗೆ ಉಡುಗೊರೆಯನ್ನು ತಂದು-ಕೊಡುವ ಸಂಪ್ರದಾಯವು ಈಗಲೂ ನಡೆದು ಬಂದಿದೆ.

ಶ್ರೀಶೈಲವು ವೀರಶೈವರ ಪವಿತ್ರಕೇಂದ್ರ. ಅದಕ್ಕೆ ಇದನ್ನು 'ವೀರಶೈವಸಿದ್ಧಮಠ' ಎಂದು ಕರೆಯುವರು. ವೀರಶೈವರು ಈ ಜ್ಯೋತಿರ್ಲಿಂಗ ಮಲ್ಲಿಕಾರ್ಜುನನನ್ನು "ಲಿಂಗ ಚಕ್ರವರ್ತಿ" ಎಂದು ಮನ್ನಿಸುವರು.

## ೯. ಮಲ್ಲಿಕಾರ್ಜುನನನ್ನು ಸ್ತುತಿಸಿದ ಕವಿಪುಂಗವರು :

ಆದಿಪುರಾಣ ಕಾಲದಿಂದಲೂ ಋಷಿ–ಮುನಿಗಳು, ಕಲಿಗಾಲದಲ್ಲಿ ಆಚಾರ್ಯರು, ಪಂಚಾಚಾರ್ಯರು, ಭಗವದ್ಭಕ್ತರು, ಸಂಸ್ಕೃತ–ಪ್ರಾಕೃತ ಮತ್ತು ದ್ರಾವಿಡ (ಕನ್ನಡ, ತಮಿಳು, ತೆಲಗು) ಮುಂತಾದ ಭಾಷೆಗಳ ಕಾವ್ಯ ಗಂಗೆಯಿಂದ ಶ್ರೀಶೈಲವನ್ನು ಸಂಪ್ರೋಕ್ಷಿಸಿ ಮಲ್ಲಿಕಾರ್ಜುನ ಲಿಂಗದ ಅಭಿಷೇಕ ವನ್ನು ಮಾಡಿರುವರು.

ಪದ್ಮ ಹಾಗೂ ಸ್ಕಂದ ಪುರಾಣಗಳಲ್ಲಿ ಸಂಸ್ಕೃತ ಶ್ಲೋಕಗಳು. ಆದಿ ಶಂಕರಾಚಾರ್ಯರ "ಸೌಂದರ್ಯ ಲಹರಿ" ಮತ್ತು "ಲಕ್ಷ್ಮೀನೃಸಿಂಹ ಷುಮಂದೇಹಿಕರಾವಲಂಬಂ" ಎಂಬ ಸಂಸ್ಕೃತ ಸ್ತುತಿಗಳು, ಶ್ರೀಮಲ್ಲಿಕಾರ್ಜುನನ ಕುರಿತು ಬರೆದವುಗಳು. ತೆಲುಗಿನಲ್ಲಿ ನನ್ನಯ್ಯ ಭಟ್ಟನೆಂಬ ಕವಿಯು, ವೀರಶೈವ ಪಂಡಿತ ತ್ರಯರಲ್ಲಿ ಪ್ರಧಾನರಾದ ಪಂಡಿತಾರಾಧ್ಯರು. ಸಂಸ್ಕೃತ ದಲ್ಲಿ ತೆನಾಲಿ ಎಂಬ ಕವಿಯು "ಶ್ರೀಶೈಲಮಹಾತ್ಮೆ" ಯಲ್ಲಿ· ಚಕ್ರಪಾಣಿ ರಂಗನಾಥ ಕವಿಯು "ಶ್ರೀಗಿರಿನಾಥ ವಿಕ್ರಮ" ಎಂಬ ಕಾವ್ಯದಲ್ಲಿ· ತೇರುವಾರು ಎಂಬುವರು ತಮಿಳುನಲ್ಲಿಯೂ ಶ್ರೀ ಮಲ್ಲಿಕಾರ್ಜುನ ಸ್ತುತಿ ಹಾಗೂ ಶ್ರೀಶೈಲ ಪರ್ವತದ ಮಹಿಮೆಯನ್ನು ಒಳ್ಳೇ ಹೃದಯಂಗಮವಾಗಿ ಮೂಡಿಸಿರುವರು. ಇದಲ್ಲದೆ ಕನ್ನಡಕವಿಪುಂಗವರಾದ ಹರಿಹರ, ರಾಘವಾಂಕ, ಸರ್ಪಭೂಷಣ ಮೊದಲಾದವರು ತಮ್ಮ ಕಾವ್ಯ ಸಂಧೆಯಿಂದ ಮಲ್ಲಿಕಾರ್ಜುನ ನನ್ನೂ ಶ್ರೀ ಭ್ರಮರಾಂಬಾ ದೇವಿಯನ್ನು ಮಜ್ಜನ ಗೈದಿರುವರು.

## ೧೦ ಜ್ಯೋತಿರ್ಲಿಂಗ :

ಇಲ್ಲಿ ಶಿವನು ಲಿಂಗರೂಪಿಯಾಗಿ ನೆಲೆಸಿರುವನು. ಇದು ಕೂಡ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಕುಪಿತಗೊಂಡು ಓಡಿಹೋದ ಮಗನಾದ ಕಾರ್ತಿಕೇಯನನ್ನು ಹುಡುಕಿಕೊಂಡು ಬಂದ ಪಾರ್ವತಿ ಪರಮೇಶ್ವರರು ಈ ಕ್ರೌಂಚಗಿರಿಯಲ್ಲಿ ನೆಲೆನಿಂತರಂತೆ. ತಮ್ಮ ಮಗನನ್ನು ಕಾಣಲು ಶಿವನು ಚಂದ್ರೋದಯದ ಮೊದಲ ದಿನದಂದು ಮತ್ತು ಪಾರ್ವತಿಯು ಹುಣ್ಣಿಮೆಯ ದಿನದಂದು ಅವನಿದ್ದಲ್ಲಿಗೆ ಹೋಗಿ ಭೆಟ್ಟಿಯಾಗಿ ಬರುವರಂತೆ.

## ಪಾತಾಳಗಂಗೆ:

ಪಾತಾಳಗಂಗೆಯನ್ನು ನೋಡದಿದ್ದರೆ, ನೆನೆಯದಿದ್ದರೆ ಶ್ರೀಶೈಲ ಯಾತ್ರೆಯು ಪೂರ್ಣವಾದಂತಲ್ಲ. ಅದಕ್ಕೆ ಅವಳ ಕಥೆಯನ್ನು ತಿಳಿದು ಕೊಳ್ಳೋಣ.

## ಕೃಷ್ಣೆಯ ಕಥೆ :

" ಕೃಷ್ಣಾ ಕೃಷ್ಣ ತನುಃ ಸಾಕ್ಷಾತ್‌ವೇಣ್ಯಾದೇವೋ ಮಹೇಶ್ವರಃ
ತತ್ಸಂಗಮ ಪ್ರಭಾವಂತು ನಾಲಂ ವಕ್ತುಂ ಚತುರ್ಮುಖಃ"॥

ಕೃಷ್ಣಾ ನದಿಯು ಕೃಷ್ಣನ ದೇಹದಿಂದಲೇ ಹುಟ್ಟಿದೆ. ವೇಣಿನದಿ ಮಹಾದೇವನ ದೇಹದಿಂದ ಜನಿಸಿದೆ. ಇವೆರಡರ ಸಂಗಮದ ಪ್ರಭಾವವನ್ನು ನಾಲ್ಕು ಮುಖದ ಬ್ರಹ್ಮನಿಂದಲೂ ಹೇಳಲಸಾಧ್ಯ. ಆದರೂ ನನ್ನ ಬುದ್ಧಿ ಶಕ್ತಿಗೆ ಅನುಸರಿಸಿ; ಕೃಷ್ಣಾ ವೇಣಿಗಳ ಉತ್ಪತ್ತಿಯ ವಿಷಯವನ್ನು ಹೇಳುತ್ತೇನೆ ಎಂದು ನಾರದರು ಹೇಳಿದರೆಂದು ಪದ್ಮ ಪುರಾಣದಿಂದ ತಿಳಿದು ಬರುವುದು.

ಪೂರ್ವಕಾಲದಲ್ಲಿ ಬ್ರಹ್ಮನು ಸಹ್ಯಾದ್ರಿ ಶಿಖರದಲ್ಲಿ ಯಜ್ಞವನ್ನು ಮಾಡಬೇಕೆಂದು; ಹರಿ-ಹರರನ್ನು ಕೂಡಿಕೊಂಡು ಸಕಲ ಏರ್ಪಾಡನ್ನು ಮಾಡಿಕೊಂಡನು. ಭೃಗು ಮೊದಲಾದ ಋಷಿಗಳನ್ನು ಆಮಂತ್ರಿಸಿದನು. ಬ್ರಹ್ಮನೇ ಯಜ್ಞದ ಯಾಜಮಾನ್ಯ ವಹಿಸಬೇಕಾದ ನಿಮಿತ್ತ ಬ್ರಹ್ಮನ ಹಿರಿಯ ಪತ್ನಿಯಾದ ಸ್ವರಾ (ಸರಸ್ವತಿ) ದೇವಿಯು ಸಮಯಕ್ಕೆ ಸರಿಯಾಗಿ ಬಾರದ ನಿಮಿತ್ತ; ಮುಹೂರ್ತವು ತಪ್ಪಬಾರದೆಂಬ ಕಾರಣದಿಂದ, ಎಲ್ಲ ದೇವತೆಗಳ ಅಭಿಲಾಷೆಯಂತೆ ಬ್ರಹ್ಮನು ತನ್ನ ಎರಡನೆಯ ಪತ್ನಿ ಗಾಯಿತ್ರಿದೇವಿಯನ್ನು ಕೂಡಿಸಿಕೊಂಡು ಮುಂದಿನ ಕಾರ್ಯವನ್ನು ಜರುಗಿಸಬೇಕೆಂಬ ಸಮಯದಲ್ಲಿ ಸ್ವರಾದೇವಿಯು ಬಂದು, ತನಗಿಂತಲೂ ಚಿಕ್ಕವಳಾದ ಗಾಯತ್ರಿದೇವಿಯನ್ನು ಕೂಡಿಸಿಕೊಂಡದ್ದನ್ನು ಕಂಡು ಅವಳಿಗೆ ಕೋಪ ಬಂದಿತು. ಆ ಕೋಪದ ಭರದಲ್ಲಿ, "ನೀವೆಲ್ಲರೂ ನದಿಯಾಗಿ ಹರಿಯಿರೆಂದೂ, ಗಾಯಿತ್ರಿಯು ಅದೃಶ್ಯ

ರೂಪದಲ್ಲಿ ನದಿಯಾಗಿ ಹರಿಯಲಿ" ಎಂದು ಶಾಪವನ್ನು ಕೊಟ್ಟಳು. ಇವಕ್ಕೆ ಪ್ರತಿಯಾಗಿ ಗಾಯಿತ್ರಿಯೂ "ನೀನು ನದಿಯಾಗಿ ಹರಿ" ಎಂದು ಸರಸ್ವತಿಗೆ ಶಾಪವನ್ನು ಕೊಟ್ಟಳು. ಈ ಅವಸ್ಥೆಯನ್ನು ಕಂಡು ದೇವತೆಗಳು ಅವರೀರ್ವರಿಗೂ ಸಾಂತ್ವನವನ್ನು ಹೇಳಿದರು. ಆಗ ಆ ಅಕ್ಕ ತಂಗಿಯರು; ಪತಿವ್ರತೆಯರಾದ ನಾವುಗಳು ಕೊಟ್ಟ ಶಾಪವು ತಿರುಗಿ ಪಡೆಯಲು ಬರದಿರುವ ಕಾರಣ, ನೀವೆಲ್ಲರೂ ನಿಮ್ಮ ನಿಮ್ಮ ಅಂಶದಿಂದ ಜಡವಾಗಿ ನೀರಾಗಿ ಹರಿಯಿರಿ. ಮತ್ತು ನಾವೀರ್ವರೂ ಅಕ್ಕ ತಂಗಿಯರು ಗುಪ್ತ ಗಾಮಿನಗಳಾಗಿ ಹರಿಯುತ್ತೇವೆ "ಎಂದು ಹೇಳಿದರು.

ಆ ಪ್ರಕಾರ ಹರಿ (ಕೃಷ್ಣ) ತನ್ನ ಅಂಶದಿಂದ ಕೃಷ್ಣಾನದಿಯಾಗಿ, ಹರ (ಶಿವ) ನು ವೇಣೀನದಿಯಾಗಿ, ಬ್ರಹ್ಮನು ಕುಮದ್ವತಿಯಾಗಿ ಹರಿದರು. ಗಾಯತ್ರಿ ಸರಸ್ವತಿಯರು ಪಶ್ಚಿಮಾಭಿಮುಖವಾಗಿ ಹರಿದು ಮುಂದೆ ಸಂಗಮಿಸಿ ಸಾವಿತ್ರಿ ನದಿಯೆಂದು ಒಂದೇ ಹೆಸರಿನಿಂದ ಹರಿದಿರುವರು.

ತದನಂತರ ಬ್ರಹ್ಮನು ಹರಿಹರರೀರ್ವರನ್ನು ಯಜ್ಞದಲ್ಲಿ ಪ್ರತಿಷ್ಠಾಪಿಸಿದನು. ಮಹಾಬಲೇಶ್ವ ಹಾಗೂ ಅತಿ ಬಲನೆಂದು ಹೆಸರಾದ ಹರಿಹರರು ಸಹ್ಯಾದ್ರಿ ಪರ್ವತದಲ್ಲಿ ಬಂದು ನಿಂದು ಬಳಿಕ ಅವರ ಪಾದಮೂಲ ಗಳಿಂದ ಕೃಷ್ಣೆ ಮತ್ತು ವೇಣಿ. ಎಂಬ ನದಿಗಳು ಹರಿದು ಮುಂದೆ ಸಂಗಮಿಸಿ " ಕೃಷ್ಣವೇಣಿ " ಎಂದು ಹೆಸರು ಬಂದಿತು. ಈ ಪವಿತ್ರ ಕೃಷ್ಣವೇಣಿಯೇ ಶ್ರೀಶೈಲದ ಗಿರಿಕಂದರಗಳಲ್ಲಿ ನುಸುಳಿ, ಧುಮುಕಿ, ಸಾನುಕಾನು ಕೊರೆದು ಕಿರಿಕಂದರಗಳನ್ನು ಸೀಳಿ ಪಾತಾಳದ ಆಳಕ್ಕೆ ಇಳಿದು ಕಂದಕಗಳಲ್ಲಿ ಹರಿಯುವು ದರಿಂದ ಇಲ್ಲಿ ಇವಳನ್ನು ' ಪಾತಾಳಗಂಗೆ ' ಎಂದು ಕರೆದಿರುವರು.

ಪಾತಾಳ ಗಂಗೆಯೆಂದು ಹೆಸರು ಬರಲು ಇನ್ನೊಂದು ಐತಿಹ್ಯವು ಉಂಟು. ಅದೇನೆಂದರೆ

ಪೂರ್ವಕಾಲದಲ್ಲಿ ಅವಂತಿ ನಗರದಲ್ಲಿ ಅಯಾಚಿತನೆಂಬ ಬ್ರಾಹ್ಮಣನೊಬ್ಬ ನಿದ್ದನು. ಅವನಿಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಿ ಮದುವೆಯನ್ನು ಮಾಡಿ

ಕೊಂಡಿರಲಿಲ್ಲ. ಆದರೂ, ಅವನ ಬಂಧು ಬಳಗದವರೆಲ್ಲರೂ ಒತ್ತಾಯದಿಂದ ' ಕಲ್ಯಾಣಿ ' ಎಂಬ ಕನ್ನೆಯನ್ನು ತಂದು ಮದುವೆ ಮಾಡಿದರು. ನಂತರ ಆ ದಂಪತಿಗಳು ಉದರ ಪೋಷಣೆಗೆಂದು ಕಾಶಿ ಪಟ್ಟಣದಲ್ಲಿ ಬಂದು ನೆಲೆಸಿದರು. ಮೊದಲಿನಿಂದಲೂ ಸಂಸಾರದಲ್ಲಿ ಆಸಕ್ತಿ ಇರದ್ದನ್ನು ತಿಳಿದು ಕಲ್ಯಾಣಿಗೆ ಜೀವನವು ಬರಡೆನಿಸಿತು. ಒಂದು ದಿನ ಬೆಳಗಿನಲ್ಲಿ ಕಲ್ಯಾಣಿಯು ಗಂಗಾನದಿಯ ಸ್ನಾನಕ್ಕೆಂದು ಹೋಗುವ ದಾರಿಯಲ್ಲಿ ಸ್ಫುರದ್ರೂಪಿಯಾದ ತರುಣನನ್ನು ನೋಡಿ ಅವನಲ್ಲಿ ಅನುರಕ್ತಳಾಗಿ ತನ್ನ ಸುಪ್ತ ಬಯಕೆಯನ್ನು ಪೂರೈಸಿಕೊಂಡಳು. ತದನಂತರ ಪರಿಸ್ಥಿತಿಯ ಅರಿವು ಮಾಡಿ ಪಶ್ಚಾತಾಪ ಪಟ್ಟು ಗಂಗಾನದಿಯಲ್ಲಿ ಮುಳುಗಿ ತನ್ನ ಪಾಪ ಪರಿಹಾರ ಮಾಡಿಕೊಳ್ಳಲು-ದ್ಯುಕ್ತಳಾದ ಸಮಯದಲ್ಲಿ ಇದನ್ನು ಕಂಡು ಗಂಗಾಮಾತೆಯು ಕುಪಿತಳಾಗಿ ಪಾಪಿಯೇ ಪತಿಯನ್ನು ವಂಚಿಸಿ ಪರಪುರುಷನಲ್ಲಿ ಅನುರಕ್ತಳಾದ ನಿಮಿತ್ತ ನನ್ನನ್ನು ಮುಟ್ಟಬೇಡ." ಎಂಬ ಅಶರೀರವಾಣಿಯಾಯಿತು. ಅದನ್ನು ಕೇಳಿ ಭಯಭೀತಳಾಗಿ ತನ್ನ ಪೂರ್ವದ ವೃತ್ತಾಂತವನ್ನೆಲ್ಲ ಅರುಹಿದಳು. ಅದನ್ನು ಕೇಳಿ ಗಂಗಾ ಮಾತೆಗೆ ಅನುಕಂಪವುಂಟಾಗಿ ಅವಳ ಪಾಪಕೂಡವನ್ನೆಲ್ಲ ತನ್ನಲ್ಲಿ ತುಂಬಿಕೊಂಡು ಕಲ್ಯಾಣಿಯನ್ನು ಉದ್ಧರಿಸಿದಳು. ತನ್ನಲ್ಲಿ ಆ ಕಲ್ಯಾಣಿಯ ಪಾಪವನ್ನೆಲ್ಲ ತುಂಬಿಕೊಂಡದ್ದರಿಂದ ಗಂಗೆಯೂ ಮಲಿನ ಳಾದಳಂತೆ. ಈ ತನ್ನ ಮಲಿನತೆಯನ್ನು ತೊಳೆದುಕೊಳ್ಳಲು ಅದೆಷ್ಟೋ ಪುಣ್ಯ ತೀರ್ಥಗಳನ್ನು ಸಂದರ್ಶಿಸಿದರು. ಅವಳ ಪಾಪವು ಪರಿಹಾರವಾಗದ ನಿಮಿತ್ತ, ಕೊನೆಗೆ ಶ್ರೀಶೈಲದ ಬೆಟ್ಟದಡಿಯಲ್ಲಿರುವ ಕೃಷ್ಣವೇಣಿಗೆ ಬಂದು, ಮಿಂದು ತನ್ನ ಮಲಿನತೆಯನ್ನು ಕಳೆದುಕೊಂಡಳಂತೆ.

ಸ್ವತಹ ಪಾವನಳೆನಿಸಿದ ಗಂಗಾದೇವಿಯು ಶ್ರೀಶೈಲದಲ್ಲಿ ಮಲ್ಲಿಕಾರ್ಜುನನ ಪಾದ ತೊಳೆದು, ಪಾತಾಳದಲ್ಲಿ ಹರಿಯುವ ಕೃಷ್ಣವೇಣಿಯಲ್ಲಿ ಸಂಗಮಿಸಿದ ನಿಮಿತ್ತ ಕೃಷಾನದಿಯೂ ಕೂಡ ಅಷ್ಟೇ ಪವಿತ್ರವಾಗಿ ಪಾತಾಳಗಂಗೆಯೆಂದು ಪ್ರಸಿದ್ಧಿ ಪಡೆದಿರುವಳು. ಇಂತಹ ಪಾತಾಳ ಗಂಗೆಯಲ್ಲಿ ಸ್ನಾನ ಮಾಡುವುದು ಪುಣ್ಯಕರ.

"ಕೃಷ್ಣೆ ಕೃಷ್ಣಾಂಗ ಸಂಭೂತೆ ಜಂತುನಾ ಪಾಪನಾಶಿನಿ
ಪಾತಾಳ ಗಂಗೇ ವರದೇ ಕೃಷ್ಣವೇಣೀ ನಮೋಸ್ತುತೆ"॥

ಈ ಜ್ಯೋತಿರ್ಲಿಂಗದ ಮೂಲ ಒಕ್ಕಣಿಕೆ—

ಮಗನಿಂದ ವಿಯೋಗ— ( Seperation from Son ) ಎಂದು
"ಅತಃ ಪರಂ ಪ್ರವಕ್ಷ್ಯಾಮಿ ಮಲ್ಲಿಕಾರ್ಜುನ ಸಂಭವಂ
ಯಂ ಶ್ರುತ್ವಾ ಭಕ್ತಿಮಾನ್ ಧೀಮಾನ್ ಸರ್ವಪಾಪೈಃ ಪ್ರಮುಚ್ಯತೆ"॥

(ಪರಮಾತ್ಮನಾದ ಮಲ್ಲಿಕಾರ್ಜುನನ ಮಹತಿಯನ್ನು ಶ್ರವಣ ಮಾತ್ರ ದಿಂದಲೇ ಬುದ್ಧಿವಂತ ಹಾಗೂ ಧಿಮಂತ ಭಕ್ತರು ಸರ್ವ ಪಾಪಗಳಿಂದ ಮುಕ್ತರಾಗುವರು.)

ಈ ಜ್ಯೋತಿರ್ಲಿಂಗದ ಕೆಳಗಡೆ ಒಂದರಂತೆ ಒಂದು ಹನ್ನೆರಡು ಲಿಂಗಗಳಿವೆಯುಂತೆ. ಮೇಲಿನ ಲಿಂಗಕ್ಕೆ ಅಭಿಷೇಕ ಮಾಡಿದರೆ ಧಾರಕಾರವಾಗಿ ಹರಿದು ಕಡೆಯಲ್ಲಿರುವ ಮೂಲಲಿಂಗವನ್ನು ಸೇರುವದೆಂತಲೂ ಪುರಾಣ ಗಳಲ್ಲಿ ಉಲ್ಲೇಖವುಂಟು. ಇದೊಂದು ಈ ಜ್ಯೋತಿರ್ಲಿಂಗದ ವೈಶಿಷ್ಟ್ಯ.

# ಶ್ರೀ ಮಲ್ಲಿಕಾರ್ಜುನ

ಸಿರಿಯಂ ಸೊಬಗನಂ ಸೂರೆಗೊಂಡಿಹ ಮೇರು ಪರ್ವತ ಶೃಂಗದಿ
ಮೆರೆಯುತಿರುವುದು ಶೃಂಗ ಗಿರಿಯುದು ಧವಳ ಕೀರ್ತಿಯ ವರ್ಧಿಪ
ಭಕ್ತಪರ್ವತ ಗೈಯ್ದ ತಪವನಂ ನೋಡಿ ನಲಿಯುತ ಒಲಿದನೀ
ಮುಕ್ತ ಮನದಲಿ ಅಸ್ತು ಎಂದೆಯೊ ಭಕ್ತ ಶ್ರೇಷ್ಠಿಯ ಬಯಕೆಗೆ ॥೧॥

ವಾಸುಮತಿಯಾ ಮನದ ಬಯಕೆಯ ಪೂರ್ಣಮಾಡಲು ಶಂಕರ
ಹೆಸರಂ ಶ್ರೀಯನಂ ಹೊತ್ತು ಅವಳಯ ಮನವ ತಣಿಸಿದಿ ಶಶಿಧರ
ಚಂದ್ರಮತಿಯೇ ಬಿಳಿಯ ಬಣ್ಣದ ಕುಸುಮ ಮಾಲೆಯ ತೊಡಿಸಲು
ಸಾಂದ್ರದಿಂದದಿ ಮೆಚ್ಚಿ ಭಕ್ತಿಗೆ ಮಲ್ಲಿಕಾರ್ಜುನನಾದಿ ನೀ ॥೨॥

ಆದಿಕೇಶವ ಶಿಷ್ಯ ಅರ್ಜುನ ತಪವ ಗೈದನು ನಿನ್ನಲಿ
ಚ್ಯೋದದಿಂದಲಿ ಅವನ ಹೆಸರನು ಹೊತ್ತುಕೊಂಡೆಯೊ ನಿರುತದಿ
ನಿನ್ನ ಶಿಖರವ ನೋಡಿದವರಿಗೆ ಮೋಕ್ಷ ಬಪ್ಪುದು ಎನುವರು
ಎನ್ನ ಶಿರವನು ಬಾಗಿ ನಮಿಪೆನಂ ಮತ್ತೆ ಜನ್ಮವು ಬಾರಲು ॥೩॥

ಚಾರು ಚಂದ್ರನ ಶ್ವೇತ ಮಲ್ಲಿಕ ಮಾಲೆಯನ್ನನು ಮುಡಿದ ನೀ
ಶಿರದ ಶಿಖಿಯಲಿ ದೇವಿ ಗಂಗೆಯ ಧರಿಸಿ ಬೆಳಗಿದಿ ಭುವಿಯಲಿ
ಮೇರು ಪರ್ವತ ರಾಜನಂದದಿ ಮೆರೆದ ಕೀರ್ತಿಯು ನಿನ್ನದು
ಬೀರಂ ಬೆಳಕನಂ ನಿನ್ನ ಲಿಂಗದ ಅಂಗದಿಂದಲಿ ತೋರುತ ॥೪॥

ಹೃದಯ ಹೈದನ ಹದವ ಮಾಡುತ ಬಿತ್ತು ಭಕ್ತಿಯ ಬೀಜವ
ಮುಂದದಿ ಬಾಗುತ ಮಲ್ಲಿಕಾರ್ಜುನ ಬರುವೆ ನಿನ್ನಯ ಶೈಲಕೆ
ಹರಸು, ಎನ್ನಯ ಸಕಲ ದುರ್ಗುಣ ಸವರಿ ನಿನ್ನ ತ್ರಿಶೂಲದಿ
ಮೆರೆಸು, ಮೋಹದ ಮಾಯಾಜಾಲವ ಮೋಕ್ಷದಾರಿಯ
ತೋರುತ ॥೫॥

—೦—

# ೩. ಶ್ರೀ ಮಹಾಕಾಳೇಶ್ವರ

ಈ ಜ್ಯೋತಿರ್ಲಿಂಗ ಮಧ್ಯಪ್ರದೇಶದಲ್ಲಿ ಮಹಾಕವಿ ಕಾಳಿದಾಸನಿಂದ ಪ್ರಸಿದ್ಧವಾದ ಉಜ್ಜಯಿನಿ ಎಂಬ ನಗರದಲ್ಲಿ ಕ್ಷಿಪ್ರಾನದಿಯ ದಡೆಯ ಮೇಲಿದೆ.

ಸುಮಾರು ಐದು ಸಾವಿರ ವರುಷದಿಂದಲೂ ಈ ಉಜ್ಜಯಿನಿ ನಗರವು ಪ್ರಸಿದ್ಧಿಯನ್ನು ಪಡೆದಿರುವುದು. ರಾಮಾಯಣ ಕಾಲದಲ್ಲಿ ಸುಗ್ರೀವನು ಈ ನಗರಕ್ಕೆ ಬಂದಿದ್ದನಂತೆ. ಶ್ರೀಕೃಷ್ಣ, ಬಲರಾಮ, ಸುಧಾಮ ಇವರೆಲ್ಲರೂ ಈ ನಗರದಲ್ಲಿ ಶಿಕ್ಷಣ ಪಡೆದರೆಂದು ಪ್ರತೀತಿ. ಬಾಣಭಟ್ಟನು ತನ್ನ ಕಾದಂಬರಿಯನ್ನು, ಶೂದ್ರಕನು ಮೃಚ್ಛಕಟಿಕ ನಾಟಕವನ್ನು, ಸೋಮದೇವನು ತನ್ನ ಕಥಾಸರಿತ್ ಸಾರವನ್ನು ಮತ್ತು ಮಹಾಕವಿ ಕಾಳಿದಾಸನು ತನ್ನ ಅನೇಕ ಗ್ರಂಥಗಳನ್ನು ಈ ನಗರದಲ್ಲಿಯೇ ಬರೆದರೆಂದು ತಿಳಿದು ಬರುವುದು. ವರಾಹಮಿಹಿರರು ಜ್ಯೋತಿಷ್ಯಗಣಿತ ಜ್ಞಾನದ ಮೊದಲನೆಯ ವೇಧಶಾಲೆಯನ್ನು ಇಲ್ಲಿಯೇ ಪ್ರಾರಂಭಿಸಿದರು. ಈ ನಗರವು ಸಂಸ್ಕೃತ ವಿದ್ಯೆಯ ಆದಿಪೀಠ ಮತ್ತು ಧರ್ಮಜ್ಞಾನ, ಕಲಾ ಈ ತ್ರಿವೇಣಿ ಸಂಗಮ ಈ ನಗರ. ಇವೆಲ್ಲ ಮೌಲ್ಯಗಳಿಂದ ಉಜ್ಜಯಿನಿ ನಗರದ ವೈಭವವು ಉತ್ತುಂಗಕ್ಕೆ ತಲುಪಿತ್ತು. ಮೌರ್ಯ, ಗುಪ್ತ ಮೊದಲಾದ ರಾಜರು ಈ ವೈಭವಗಳನ್ನು ಮತ್ತಷ್ಟು ಊರ್ಜಿತಗೊಳಿಸಿದರು. ಇದು ವಿಕ್ರಮಾದಿತ್ಯನ ರಾಜಧಾನಿಯೂ ಆಗಿತ್ತು.

ರಾಜಾ ಭರತೃಹರಿಯ ಶತಕತ್ರಯ, ವಾಸವದತ್ತ ಮತ್ತು ಉದಯನ ಇವರ ಪ್ರೇಮಕಥೆ. ಭವಭೂತಿಯ ಸೃಷ್ಟಿಸೌಂದರ್ಯದ ವರ್ಣನೆ ಇವೆಲ್ಲವೂ ಉಜ್ಜಯಿನಿ ನಗರದಲ್ಲಿಯೇ ಹುಟ್ಟಿ ಬಂದವುಗಳು.

# ಪೌರಾಣಿಕ ಹಿನ್ನೆಲೆ

೧) ಆದಿಕಾಲದಲ್ಲಿ ರತನಮಾಲಾ ಎಂಬ ಪರ್ವತ ಪ್ರದೇಶದಲ್ಲಿ 'ದೂಷಣ'ನೆಂಬ ರಾಕ್ಷಸನಿದ್ದನು. ಆತ ವೇದಗಳಿಗೆ ಕಂಟಕ ಪ್ರಾಯನಾಗಿದ್ದ. ವೇದಪ್ರಿಯನೆಂಬ ವಿದ್ವಾಂಸನಿಗೆ **ಉ**ಪಟಳ ಕೊಡುತ್ತಿದ್ದನು. ವೇದಪ್ರಿಯನಿಗೆ ವಿವೇಕಿಗಳೂ, ಧೀರರೂ, ವಿದ್ವಾಂಸರೂ ಆದ ನಾಲ್ಕು ಮಕ್ಕಳಿದ್ದರು. ಅವರೂ ತಂದೆಯಂತೆಯೇ ಶಿವಭಕ್ತರು. ರಾಕ್ಷಸನ ಉಪಟಳವನ್ನು ಸಹಿಸದೆ ಅವರು ಶಿವನನ್ನು ಕುರಿತು ತಪಸ್ಸು ಮಾಡಿ ಒಲಿಸಿಕೊಂಡರು. ಆಗ ಶಿವನು ಪ್ರತ್ಯಕ್ಷನಾಗಿ ಆ ದೂಷಣ ರಾಕ್ಷಸನನ್ನು ಸಂಹಾರ ಮಾಡಿದನು. ಮಹಾ-ಕಾಲಾಂತಕನಾದ ರಾಕ್ಷಸನನ್ನು ಸಂಹಾರ ಮಾಡಿದ ನಿಮಿತ್ತ ಶಿವನಿಗೆ ಇಲ್ಲಿ ಮಹಾಕಾಲೇಶ್ವರನೆಂದು ಹೆಸರು ಬಂದಿತು. ಇಲ್ಲಿ ಶಿವನು ಲಿಂಗರೂಪದಲ್ಲಿದ್ದು ಜ್ಯೋತಿಯನ್ನು ಬೆಳಗುತ್ತಿರುವುದರಿಂದ ಜ್ಯೋತಿರ್ಲಿಂಗವೆಂದು ಹೆಸರು ಪಡೆದಿದೆ.

೨) ಇನ್ನೊಂದು ಆಖ್ಯಾಯಿಕೆಯೂ ಉಂಟು—

ಪೂರ್ವಕಾಲದಲ್ಲಿ ಚಂದ್ರಸೇನ ರಾಜನೆಂಬವನು ಒಮ್ಮೆ ಶಿವನನ್ನು ಪೂಜಿಸುವ ಸಮಯದಲ್ಲಿ ಗೋಪಾಲಕನೋರ್ವ ಅಲ್ಲಿ ಬಂದು ರಾಜನ ಪೂಜೆಯನ್ನು ಕಂಡು ಅವನಲ್ಲಿಯೂ ಶಿವಭಕ್ತಿಯುಂಟಾಯಿತು. ಆತನು ಒಂದು ಗುಂಡು ಕಲ್ಲನ್ನು ತೆಗೆದುಕೊಂಡು ಮನೆಗೆ ಹೋಗಿ ಅದುವೇ ಶಿವಲಿಂಗವೆಂದು ಪೂಜಿಸ ಹತ್ತಿದನು. ಆ ಸಮಯದಲ್ಲಿ ತನ್ನ ತಾಯಿಯು ಎಷ್ಟೇ ಕರೆದರೂ ಅವರ ಕಡೆ ಗಲಕ್ಷಗೊಡದೇ ತನ್ನ ಪೂಜೆಯಲ್ಲಿಯೇ ಮಗ್ನನಾಗಿರುತ್ತಿದ್ದನು. ಇದನ್ನು ಕಂಡು ಆ ತಾಯಿಗೆ ಸಿಟ್ಟು ಬಂದು ಆ ಮಗುವು ಪೂಜಿಸುತ್ತಿದ್ದ ಗುಂಡುಕಲ್ಲನ್ನು ಎತ್ತಿ ಭೀಸಿ ಹೊರಗೊಗೆದಳು. ಇದರಿಂದ ಆ ಬಾಲಕನು ಅಳುತ್ತ ಮೂರ್ಛೆ ಹೋಗಿ ಬಿದ್ದನು. ಆ ಸಮಯದಲ್ಲಿ ಚಮತ್ಕಾರವಂದು ನಡೆಯಿತು. ಅದೇನೆಂದರೆ; ಶಿವನು ಪ್ರತ್ಯಕ್ಷನಾಗಿ ಆ ಮಗುವನ್ನು ಮೂರ್ಛೆಯಿಂದ ಎಬ್ಬಿಸಿ ತಾಯಿ ಮಕ್ಕಳಿಗೀರ್ವರಿಗೂ ದರ್ಶನವಿತ್ತು ಅಲ್ಲಿಯೇ ಐಕ್ಯನಾದನೆಂದು ತಿಳಿದು ಬರುತ್ತದೆ.

ತದನಂತರ ಈ ಸಂಗತಿಯು ಚಂದ್ರಸೇನ ರಾಜನಿಗೆ ತಿಳಿಯಲು ಗೋಪಾಲಕನ ಮನೆಗೆ ಬಂದು ಸಂಗತಿಯನ್ನು ತಿಳಿದುಕೊಂಡು; ಶಿವನು ಅದೃಶ್ಯನಾದಸ್ಥಳದಲ್ಲಿ ಅಗಿಸಿ ನೋಡಲಾಗಿ ಅಲ್ಲಿ ಜ್ಯೋತಿರ್ಮಯವಾದ ಲಿಂಗವಂದು ಕಂಡು ಬಂದಿತು. ಆ ಸ್ವಯಂಭೂ ಲಿಂಗವನ್ನು ರಾಜನು ಪ್ರಾಣ ಪ್ರತಿಷ್ಠಾಪನೆ ಮಾಡಿ ಅಲ್ಲೊಂದು ಭವ್ಯ ಮಂದಿರವನ್ನು ಕಟ್ಟಿಸಿದನಂತೆ ಈಗಿರುವ ಮಂದಿರವೇ ಅದೇ ಎಂದು ಹೇಳುವರು.

## ಮಂದಿರ :

ಮಂದಿರವು ಅತ್ಯಂತ ವಿಶಾಲವೂ, ಭವ್ಯವೂ ಇದೆ. ಮಂದಿರದ ಶಿಖರವು ಬೃಹದಾಕಾರವೂ, ಕಲಾತ್ಮಕವಾಗಿಯೂ, ಸುಂದರವಾಗಿಯೂ ಇದ್ದು ಕಣ್ಮನಗಳನ್ನು ಸೆಳೆಯುವುದು. ಮಂದಿರದಲ್ಲಿ ಮಹಾಕಾಲೇಶ್ವರನ ಲಿಂಗವು ಶಾಲಿಗ್ರಾಮ ಶಿಲೆಯದ್ದಿದ್ದು ಅದರ ಕವಚವು ಬೆಳ್ಳಿಯದು. ಲಿಂಗವು ನಾಗಭೂಷಣವಿದ್ದು ಭಸ್ಮಲೇಪಿತವಿರುತ್ತದೆ. ಶಿವಲಿಂಗದ ಸುತ್ತಲೂ ವಿಶಾಲವಾದ ಪಾಣೀಪೀಠ. ಮಂದಿರವು ತ್ರಿಖಂಡಿಯಾಗಿದೆ. ತಳಭಾಗದಲ್ಲಿ ಮಹಾಕಾಲೇಶ್ವರನಲಿಂಗ, ಮೆಲ್ಗಡೆಯಲ್ಲಿ ಓಂಕಾರೇಶ್ವರಲಿಂಗ ಮತ್ತು ಮೂರನೆಯ ಭಾಗದಲ್ಲಿ ನಾಗಚಂದ್ರೇಶ್ವರಲಿಂಗ. ಇವುಗಳ ದರ್ಶನವು ನಾಗಪಂಚಮಿಯ ದಿನದಂದು ಮಾತ್ರಲಭ್ಯ. ಮಂದಿರದಲ್ಲಿ ಸದಾಕಾಲವೂ ಎಣ್ಣೆ ಹಾಗೂ ತುಪ್ಪದ ದೀಪಗಳ ನಂದಾದೀಪ ಪ್ರಜ್ವಲಿಸುತ್ತಿರುವುದು.

ಮಹಾಕಾಲೇಶ್ವರನಿಗೆ ವರುಷ ಪರಿಯಂತ ಅನೇಕ ಉತ್ಸವಗಳು ಜರುಗಿದರೂ ಅವುಗಳಲ್ಲಿ; ಶಿವರಾತ್ರಿಯ ಭಸ್ಮಾರತಿ ಮತ್ತು ಸಿಂಹಸ್ಥ ಗುರು ಸಿಂಹರಾಶಿಯನ್ನು ಪ್ರವೇಶಿಸುವ ಸಂದರ್ಭದಲ್ಲಿ ಜರುಗುವ ಕುಂಭ ಮೇಳಾ ಉತ್ಸವ. ಇವೆರಡುಗಳು ಬಹಳ ಮಹತ್ವವನ್ನು ಪಡೆದಿರುವವು. ಆಗ ಲಕ್ಷೋಪಲಕ್ಷ ಭಕ್ತರು ಸೇರುವರು.

ಉಜ್ಜಯನಿಯಲ್ಲಿರುವ ಈ ಕ್ಷೇತ್ರವು ಸ್ವಚ್ಛತೆಯನ್ನೆ ಬಿಂಬಿಸುವ ಕನ್ನಡಿ ಯಂತಿದೆ. ಮಂದಿರದ ಅರ್ಚನೆಗಾಗಿ ಹದಿನಾರು ಮಂದಿ ಮಹಂತಿಯರಿರು ವರಂತೆ ಸಮಯಾನುಸಾರ ಎಲ್ಲರಿಗೂ ಪೂಜೆಯ ಹಕ್ಕು ದೊರೆಯುವ

ವ್ಯವಸ್ಥೆಯುಂಟು. ಶಿವರಾತ್ರಿಯಂದು ಬರುವ ಪಾಳಿಯ ಮಹಂತರಿಗೆ ಸೌಭಾಗ್ಯವೆಂದೇ ತಿಳಿಯಬೇಕು. ಶಿವರಾತ್ರಿಯಂದು ಬರುವ ಪಾಳಿಯ ಮಹಂತರು ಮುಖ್ಯ ಅರ್ಚಕರೆನಿಸಿದರೂ ಇನ್ನುಳಿದ ಮಹಂತರೂ ಸಹಕರಿಸಿ ಶಿವರಾತ್ರಿಯ ಉತ್ಸವವನ್ನು ಒಳ್ಳೇ ಯಶಸ್ವಿಯಾಗಿ ಪೂರೈಸುವರು. ಶಿವರಾತ್ರಿ ಶಿವನಿಗೆ ಪ್ರೀತಿ. ಹೀಗಾಗಿ ಇಲ್ಲಿಯ ಶಿವಲಿಂಗಕ್ಕೆ ಬಹು ವಿಜೃಂಭಣೆಯ ಪೂಜೆ.

## ಭಸ್ಮಾರತಿ :

ಈಶ್ವರ ಭಸ್ಮೋದ್ಧೂಲಿತ. ಆತನ ಪ್ರೀತಿಯ ಲೇಪನ ಭಸ್ಮ ಆದ್ದರಿಂದ ಆತನನ್ನು ಬೂದಿ ಬಡಕನೆಂದು ನಗೆ ಮಾತಿನಲ್ಲಿ ಕರೆಯುವ ರೂಢಿ. ಹೀಗಾಗಿ ಇಲ್ಲಿ ಆತನಿಗೆ ಜರುಗುವ ಭಸ್ಮಾರತಿ ಎಂಬ ಉತ್ಸವಕ್ಕೆ ಬಹಳ ಮಹತ್ವ. ಬೆಳಗಿನ ನಾಲ್ಕು ಗಂಟೆಗೇ ಜರಗುವ ಭಸ್ಮಾರತಿಯು ನೋಡ ತಕ್ಕದ್ದು. ಬೆಳಗಿನ ಕೊರೆಯುವ ಚಳಿಯಲ್ಲಿಯೂ ಪಕ್ಕದ ತಣ್ಣೀರಿನ ಕುಂಡದಲ್ಲಿ ಸ್ನಾನಮಾಡಿ ಬಾಯಲ್ಲಿ ಏನೂ ಹಾಕಿಕೊಳ್ಳದೇ ಮೌನಿಯಾಗಿ ಬಂದು ಭಸ್ಮಾರತಿಯನ್ನು ನೋಡುವುದೇ ಒಂದು ಸೌಭಾಗ್ಯ. ಈ ಭಸ್ಮಾರತಿಯು ಶಿವರಾತ್ರಿಯಂದು ಮಾತ್ರ ನಡೆಯುತ್ತದೆ. ಇದು ಉಜ್ಜಯನಿಯ ಮಹಾಕಾಲೇಶ್ವರನಿಗಲ್ಲದೆ ಮತ್ತಾವ ಈಶ್ವರ ಲಿಂಗಕ್ಕೂ ಜರುಗುವುದಿಲ್ಲ.

ಶಿವರಾತ್ರಿಯಂದು ಸುಮಾರು ರಾತ್ರಿ ಹನ್ನೊಂದು ಗಂಟೆಗೆ ಮಹಾಕಾಲೇಶ್ವರನಿಗೆ ಜಲಾಭಿಷೇಕ, ಕ್ಷಿಪ್ರಾ ನದಿಯ ಪವಿತ್ರ ಜಲದಿಂದ ಲಿಂಗದ ಅಂಗವನ್ನೆಲ್ಲ ಉಜ್ಜಿ-ಉಜ್ಜಿ ಸ್ನಾನ, ಆಮೇಲೆ ದುಗ್ಧದಿಂದ ಮಜ್ಜನ, ಕೊನೆಗೆ ಜಲದಿಂದ ಲಿಂಗವನ್ನೆರೆದು, ಗಂಧಾಕ್ಷತೆ, ಪುಷ್ಪಾಲಂಕಾರ, ನಂತರ ಗಂಧ–ಧೂಪ–ದೀಪಾರತಿ. ಇದನ್ನೆಲ್ಲ ಪೂರೈಸಲು ಕನಿಷ್ಟ ಮೂರುನಾಲ್ಕು ಗಂಟೆಗಳಾದರೂ ಬೇಕು. ತದ ನಂತರ ಜರುಗುವುದೇ ಭಸ್ಮಾರತಿ. ಆ ಪೂರ್ವದಲ್ಲಿ ಲಿಂಗವನ್ನು ನಿರ್ಮಾಲ್ಯ ಮಾಡಿ ನಗ್ನವಾಗಿ ಉಳಿಸುವರು.

ಶುಭ್ರ ತೆಳುವಾದ ವಸ್ತ್ರದಲ್ಲಿ ಭಸ್ಮವನ್ನು ಕಟ್ಟಿ, ಆ ಗಂಟನ್ನು ಶಿವಲಿಂಗದ ಮೇಲೆಲ್ಲಾ ನಾಲ್ಕೂ ಬದಿಗೂ ಅಲುಗಾಡಿಸುವರು. ಆಗ ಆ ಭಸ್ಮದ ನವಿರಾದ ಧೂಲಿಯ ಕಣಗಳು ವಸ್ತ್ರದ ರಂಧ್ರದಿಂದ ತುಂತುರು ತುಂತುರವಾಗಿ ನುಸುಳಿ ಬಂದು ಶಿವಲಿಂಗದ ತುಂಬೆಲ್ಲ ಆವರಿಸುವವು. ಈ ಕಾರ್ಯವು ಕನಿಷ್ಟ ಅರ್ಧ ಗಂಟೆಯ ಪರಿಯಂತವೂ ಸಾಗುವುದು. ಆಗ ಶಿವಲಿಂಗವು ಭಸ್ಮದ ಧೂಲಿಯಿಂದ ಸಂಪೂರ್ಣ ಆಚ್ಛಾದಿತವಾಗಿ ಭೋಲಾ ಶಂಕರನಂತೆ ಕಾಣುವುದು. ಇದನ್ನೇ ಭಸ್ಮಾರತಿ ಎಂದು ಕರೆಯುವರು. ಬೆಳಗಿನ ನಾಲ್ಕು ಗಂಟೆಗೆ ಜರುಗುವ ಭಸ್ಮಾರತಿಯನ್ನು ನೋಡಿದ ಭಕ್ತರು ಧನ್ಯರಾಗುವರು. ಆ ಸಮಯದಲ್ಲಿ ಲಿಂಗಕ್ಕೆ ಯಾವ ಅಲಂಕಾರಗಳೂ ಇರುವುದಿಲ್ಲ. ಬರಿ ನಗ್ನ ಲಿಂಗ. ಭಸ್ಮಾರತಿಯು ಭವ್ಯ–ದಿವ್ಯವೆನಿಸುವುದು. ಲಘುರುದ್ರದ ಪಠಣದೊಂದಿಗೆ ಲಿಂಗಕ್ಕೆ ಭಸ್ಮಸ್ನಾನ, ಸ್ನಾನಾನಂತರ ಭಸ್ಮಾರತಿ ಇರುವುದೊಂದು ಅಪ್ರತಿಮ ಅನುಭವದ ಪ್ರತೀತಿ.

ಭಸ್ಮಾರತಿಯನಂತರ ಪುನಃ ಲಿಂಗವನ್ನು ಜಲ-ದುಗ್ಧ-ಪಂಚಾಮೃತಗಳಿಂದ ಎರೆದು ಕೊನೆಗೆ ಶುದ್ಧ ಜಲದಿಂದ ಮಜ್ಜನ ಮಾಡಿಸಿ; ಗಂಧಾಕ್ಷತೆ, ಪುಷ್ಪಾಲಂಕಾರ, ಜಟಾಜೂಟಮಯವಾದ ಕಿರೀಟ, ನಾಗಾಭರಣ, ಚಂದ್ರಬಿಂಬ, ಗಂಗಾಧಾರೆ, ಕೊರಳಲ್ಲಿ ರುಂಡಮಾಲೆಯ ಕಂಠಾಭರಣ, ಕರಗಳಲ್ಲಿ ತ್ರಿಶೂಲ, ಡಮರು ಮುಂತಾದ ಸಕಲಂಕಾರಗಳಿಂದ ಲಿಂಗವನ್ನು ಆಭೂಷಿಸಿ ಮಹಾದೇವನನ್ನಾಗಿ ಮಾಡುವರು. ಆಗ ಆತನಿಗೆ ಮಂತ್ರ ಘೋಷದಿಂದ ಅನೇಕ ಬಗೆಯ ಧೂಪ–ದೀಪಗಳ ಮಂಗಳಾರತಿಯನ್ನು ಬೆಳಗುವರು. ಆಗ, ಕರ್ಣಗಳಿಗೆ ಸುಮಧುರವಾದ ಘಂಟೆ, ಜಾಗಟೆ, ಡಮರುಗಳ ನಿನಾದ ಗಗನ ತಲುಪಿ ಪ್ರತಿಧ್ವನಿ ಗೈದು ಭಕ್ತಕೋಟಿಯನ್ನು ಬಡಿದೆಬ್ಬಿಸುವುದು. ಈ ಪರಿಯ ಪೂಜಾವಿಧಿಗಳು ಪೂರೈಸಿದನಂತರ ಆತನಿಗೆ ತೊಡಿಸಿದ ವಿಶೇಷ ಅಲಂಕಾರಗಳನ್ನು ಒಂದೊಂದಾಗಿ ತೆಗೆದು ಬರಿಲಿಂಗಮಯವಾಗಿ ಉಳಿಯುವಂತೆ ಮಾಡಿ, ಪುನಃ ಜಲ-ಕ್ಷೀರಗಳಿಂದ ಅಭಿಷೇಕವನ್ನು ಮಾಡಿಸಿ, ಗಂಧ ಲೇಪನ ಗೈದು ಲಿಂಗದ ತಲೆಯ ಮೇಲೆಲ್ಲ ಪುಷ್ಪವೃಷ್ಟಿ ಗೈಯುವರು. ಆಗ

ಆತನು ನಿರಾಭರಣ ಸುಂದರನಾಗಿ ಕಾಣುವನು. ಆಮೇಲೆ ಸಕಲ ಭಕ್ತ ವೃಂದಕ್ಕೆ, ಕ್ಷೀರಾಭಿಷೇಕಕ್ಕಾಗಲೀ, ಜಲಾಭಿಷೇಷಕ್ಕಾಗಲೀ, ಪುಷ್ಪಾರ್ಚನೆಗಾಗಲೀ ಅವಕಾಶ, ಹಾಗೂ ಧರ್ಮದರ್ಶನದ ಅವಕಾಶ.

ಜನರ, ದೇಶದ, ಜಗತ್ತಿನ ಕಲ್ಯಾಣಕ್ಕಾಗಿಯೇ ಇಷ್ಟೊಂದು ವೈಭವದಿಂದಲೂ, ಶಾಸ್ತ್ರೋಕ್ತದಿಂದಲೂ ಈ ಮಹಾಕಾಲೇಶ್ವರ ಲಿಂಗವನ್ನು ಶಿವರಾತ್ರಿಯಂದು ಪೂಜಿಸುವುದನ್ನು ಅಲ್ಲಿಯ ಮಹಂತರು ಒಳ್ಳೇ ಉತ್ಸುಕತೆಯಿಂದಲೂ, ಹೆಮ್ಮೆಯಿಂದಲೂ ಹೇಳುವರು.

## ಐತಿಹಾಸಿಕ ಹಿನ್ನೆಲೆ :

ಈ ಮಂದಿರವು ಮಹಮ್ಮದೀಯರ ಆಳಿಕೆಯಲ್ಲಿ ದಾಳಿಗೊಳಗಾಗಿ ವಿಧ್ವಂಸಗೊಳ್ಳಲ್ಪಟ್ಟಿತು. ಮತ್ತು ಶಿವಲಿಂಗದ ಬುಡದಲ್ಲಿದ್ದ ಅಪಾರ ಸಂಪತ್ತನ್ನು ದೋಚಿದ್ದಲ್ಲದೆ ಲಿಂಗವನ್ನು ಬಳಿಯಲ್ಲಿರುವ ಕೋಟಿತೀರ್ಥದಲ್ಲಿ ಒಗೆದು ಬಿಟ್ಟಿದ್ದರು. ಮಂದಿರವಿರುವ ಸ್ಥಳದಲ್ಲಿ ಮಸೀದೆಯೊಂದನ್ನು ಕಟ್ಟಿಸಿದ್ದರೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ತದನಂತರ ದಿಲ್ಲಿಯ ಆಡಳಿತವು ಶಹಾಜಿಯ ಕೈಯಲ್ಲಿ ಬಂದನಂತರ ಶ್ರೀಮಂತ ರಾಣೋಜಿ ಶಿಂಧೆ ಎನ್ನುವ ಮಹಾನುಭಾವರು ೧೭೩೪ ನೇ ಇಸ್ವಿಯಲ್ಲಿ ಶ್ರೀರಾಮಚಂದ್ರ ಬಾಬಾ ಶೇಲಾವಿ ಎಂಬವರಿಂದ ಪುನಃ ಅದೇ ಸ್ಥಳದಲ್ಲಿ ಮಂದಿರವನ್ನು ಕಟ್ಟಿಸಿ, ಕೋಟಿತೀರ್ಥದಲ್ಲಿ ಬೀಸಾಡಿದ ಆ ಮಹಾಕಾಲೇಶ್ವರ ಲಿಂಗವನ್ನು ಹೊರದೆಗೆದು ಅದರ ಮೊದಲಿನ ಮೂಲ ಸ್ಥಳದಲ್ಲಿಯೇ ಪ್ರತಿಷ್ಠಾಪಿಸಿದರೆಂದು ತಿಳಿದು ಬರುವುದು.

ಕವಿ ಕಾಲಿದಾಸನು ತನ್ನ ಮೇಘದೂತ ಕಾವ್ಯದಲ್ಲಿ ಉಜ್ಜಯಿನಿಯನ್ನು ವರ್ಣಿಸುವಾಗ ಈ ಮಹಾಕಾಲೇಶ್ವರನನ್ನು ಮರೆತಿಲ್ಲ.

"ಅಪ್ಯನ್ಯಸ್ಮಿನ್ ಜಲಧರ ಮಹಾಕಾಲ ಮಾಸಾದ್ಯಕಾಲೇ
ಸ್ಥಾತವ್ಯಂತೆನಯನ ವಿಷಯಂ ಯಾವದತ್ಯೇತಿ ಭಾನುಃ
ಕುರ್ವ್ವನ್ ಸಂಧ್ಯಾಬಲಿಪಟಹತಾಂ ಶೂಲಿನಃ ಶ್ಲಾಘನೀಯಾ-
ಮಾಮಂದ್ರಾಣಾಂ ಫಲಮ ವಿಕಲಂ ಲಪ್ಸ್ಯಸೆ ಗರ್ಜಿತಾನಾಮ್"

( ಎಲೈ ಮೋಡವೆ, ನೀನು ಆವೇಳೆಯಲ್ಲಿಯೂ ಕೂಡ ಮಹಾಕಾಲೇಶ್ವರನನ್ನು ತಲುಪಿದರೂ, ಸೂರ್ಯಾಸ್ತ ವಾಗುವವರೆಗೂ ಅಲ್ಲಿ ನಿಲ್ಲು. ಏಕೆಂದರೆ, ಶಿವನ ಪ್ರದೋಷಕಾಲದ ಪೂಜಾ ಸಮಯದಲ್ಲಿ ಚೌಘಡವನ್ನು ಬಾರಿಸುವ ತೆರದಲ್ಲಿ ಘುಡು-ಘುಡು ಶಬ್ದ ಮಾಡಿದರೆ ನಿನಗ ಅದರ ಪುಣ್ಯ ಲಭಿಸೀತು ಮತ್ತು ನಿನ್ನ ಗುಡುಗೂ ಸಾರ್ಥಕವಾದೀತು.

ಕವಿಕಾಲಿದಾಸನು ಪಾರ್ಥಿವ ಮೋಡಕ್ಕೆ ಪಾರ್ಥಿವ ಲಿಂಗ ಪೂಜನ ಸಮಯದಲ್ಲಿ ಗುಡು ಗುಡು ಎಂಬ ಚೌಘಡ ವಾದನದ ಸೇವೆಯನ್ನು ಮಾಡಿ ಪುಣ್ಯ ಪಡೆದುಕೊ ಎಂದಿರುವನು. ಜೀವ ಸೃಷ್ಟಿಯಲ್ಲಿ ಶ್ರೇಷ್ಠ ಪ್ರಾಣಿಯಾದ ಮಾನವನು ಇದನ್ನು ಕುರಿತು ಚಿಂತನ ಮಾಡಬೇಕಷ್ಟೆ !

ಈ ಮೇಲಿನ ಕಾಲಿದಾಸನ ಸಂಸ್ಕೃತದ ಪದ್ಯದ ಭಾವಾರ್ಥ ಬರುವಂತೆ ಕನ್ನಡಕ್ಕೆ ತಂದ ಬೇಂದ್ರೆಯವರ ಪದ್ಯವನ್ನು ಇಲ್ಲಿ ಕೊಟ್ಟಿರುವೆ.

"ನಿನ್ನ ಕಣ್ಣು ಹೊಲದಾಚೆಗಾಗಿ ರವಿ ತಣ್ಣಗಿರುವವರೆಗೂ
ಸುಳ್ಳೆ ಪಳ್ಳೆ ತರಹರಿಸಬೇಡ, ಇರು ಅಲ್ಲೆ ಬೈಗವರೆಗು ॥
ದೇವ ಸೇವೆ ನಡೆದಾಗ ಸಂಜೆ ದುಂದುಭಿಯ ಮೊಳಗು ನೀನು
ಪೂಜ್ಯ ವಸ್ತುವಿನ ಪೂಜ್ಯಗೊದಗದಾನಾದವಿದ್ದು ಏನು ? " ॥

## ಉಜ್ಜಯಿನಿ ನಗರ :

ಉಜ್ಜಯಿನಿ ನಗರಾಧಿಪತಿ ಮಹಾಕಾಲೇಶ್ವರ. ಈ ನಗರವು ಮಹಾಕಾಲೇಶ್ವರನಿಂದ ಪ್ರಸಿದ್ಧಿಯನ್ನು ಪಡೆದಂತೆ; ಖಗೋಲ ಶಾಸ್ತ್ರದಿಂದಲೂ ಪ್ರಸಿದ್ಧಿಯನ್ನು ಪಡೆದಿರುವುದು. ಅಲ್ಲದೆ ಕಾಲಿದಾಸನ ನಗರ ಎಂದೂ ಪ್ರಸಿದ್ಧಿ.

ಕವಿಕಾಳಿದಾಸನ ಮೇಘದೂತವಲ್ಲಿ ಉಜ್ಜಯಿನಿ ನಗರವನ್ನು ಕುರಿತು ಬರುವ ಸಂಸ್ಕೃತ ವರ್ಣನೆಯನ್ನು ಕವಿ ಅಂಬಿಕಾತನಯದತ್ತರು ಕನ್ನಡದಲ್ಲಿ ಒಡ ಮೂಡಿಸಿದ ಪದ್ಯಗಳನ್ನು ಇಲ್ಲಿ ಉದಹರಿಸಲಾಗಿದೆ.

"ಉತ್ತರಕ್ಕೆ ಹೊರಟವಗೆ ಉಜ್ಜಯಿನಿ ಅಡ್ಡವಾದರೇನು ?
ಅಲ್ಲಿ ಮೇಲು ಮಾಳಿಗೆಯ ಭೋಗ ಕಳಕೊಳ್ಳಬೇಡ ನೀನು॥
ಆ ಊರ ಹೆಂಗಸರ ಕಣ್ಣಬಳಿ ಮಿಂಚ ಮಿಣುಕು ಎನ್ನು
ಅವರ ಕಣ್ಣ ಕುಡಿ ಒಲ್ಲೆಯೊಲ್ಲೆಯಾ ? ವ್ಯರ್ಥವಿದ್ದು ಕಣ್ಣು"॥

" ರುದ್ರಗಣವು ಬಾಗೀತು ನಿನಗೆ ಹೇ ಕೊರಳಗರಳ ವರಣಾ
ಕಾಣು ಹೋಗು ಶ್ರೀಚಂಡಿ ಪತಿಯ ಮಹಾಂಕಾಳ ಪುಣ್ಯಚರಣ॥
ಅವನ ತೋಟದಲಿ ಗಾಳಿತೀಡುವುದು ಗಂಧವತಿಯನೆರೆದು
ಕಮಲಗಂಧಿಯರು ಮಿಂದ ನೀರಿಗರವಿಂದಗಂಧ ಬೆರೆದು "॥

" ರಮಣರತ್ತ ಉಜ್ಜಯಿನಿ ರಮಣಿಯರು ಹೊರಟ ರಾತ್ರಿಯಲ್ಲಿ
ರಾಜ ಬೀದಿ ಕಗ್ಗತ್ತಲಾಗಿ ಕಂಗೆಡಿಸಿ, ಮಿಂಚ ಚೆಲ್ಲಿ॥
ದಾರಿದೋರು ಹೊಂಬೆಳಕ ಮಾಡಿ ಮಳೆಗುಡುಗು ಬೇಡೊ ಮೇಘಾ
ಮೊದಲೆ ಹೆದರಿದವರವರೆಲು, ಕಳುವಿನಲಿ ಹೋಗಬೇಕು ಬೇಗ "॥

ಭಾರತೀಯ ಖಗೋಲ ಶಾಸ್ತ್ರವು ಅತಿ ಪುರಾತನದು. ಆರ್ಯಭಟ್ಟ, ವರಾಹಮಿರ, ಬ್ರಹ್ಮಗುಪ್ತ, ಎರಡನೆಯ ಭಾಸ್ಕರಾಚಾರ್ಯ ಇವರೆಲ್ಲರೂ ಖಗೋಲ ಶಾಸ್ತ್ರವನ್ನು ಅಭ್ಯಸಿಸಿ, ಗುರುತಿಸಿ ಜಗದಾದ್ಯಂತ ಮನ್ನಣೆಯನ್ನು ಪಡೆದವರು. ಈಗಿನ ವೈಜ್ಞಾನಿಕ ಯುಗಕ್ಕೆ ಗ್ರಾಸವನ್ನು ಒದಗಿಸಿಕೊಟ್ಟವರು. ವೈಜ್ಞಾನಿಕ ವಿಚಾರಗಳ ಮಾರ್ಗದರ್ಶಿಯೆಂದು ವರಾಹಮಿರರನ್ನು ಗುರುತಿಸು ವರು. ಇವರು ೯೪೦ರ ಹಿಂದು ಮುಂದು ಅವಂತಿ ನಗರದಲ್ಲಿ ಇದ್ದರೆಂದು ಪ್ರತೀತಿ. ಹೀಗಾಗಿ, ಇವರ ನೆನಪಿನ ಕುರುಹಾಗಿ ಉಜ್ಜಯಿನಿಯಲ್ಲಿ ವೇಧ

ಶಾಲೆಯೊಂದಿರುವುದು. ವರಾಹಮಿಹಿರರು ಉಜ್ಜಯಿನಿಯನ್ನು ಭೂಮಂಡಲದ ಕೇಂದ್ರ ಬಿಂದು ಎಂದು ಗ್ರಹಿಸಿ ಖಗೋಲ ಶಾಸ್ತ್ರದ ಅಧ್ಯಯನ ಮಾಡಿದರಂತೆ. ಹದಿನೈದನೆಯ ಶತಮಾನದ ನಂತರ ಮಾಳವದ ರಾಜ್ಯ ಪಾಲನಾಗಿದ್ದ ಮುಹಮ್ಮದ ಶಹಾನ ಆಜ್ಞಾನುಸಾರ ಜಯಪುರದ ರಾಜ ಜಯಸಿಂಹನು ದಿಲ್ಲಿಯಲ್ಲಿರುವಂತಹ ವೇಧ ಶಾಲೆಯನ್ನು ಉಜ್ಜಯಿನಿಯಲ್ಲಿ ಕಟ್ಟಿಸಿದನಂತೆ. ಅದನ್ನು ಜಂತರ ಮಂತರ ಎಂದು ಕರೆದರು. ಇದರ ಪುನರುದ್ಧಾರವನ್ನು ೧೯೩೩ ರಲ್ಲಿ ಆಗಿನ ಸಂಸ್ಥಾನಿಕರಾದ ಮಾಧವರಾವ ಸಿಂಧಿಯಾ ಮಾಡಿಸಿದರಂತೆ. ಅಲ್ಲಿ ಇನ್ನಿತರ ಯಂತ್ರಗಳೆಂದರೆ; ಸಮ್ರಾಜ್ಯ ಯಂತ್ರ, ದಿಗಂಶಯಂತ್ರ, ನಾಡಿವಲಯಯಂತ್ರ, ಯಾದ್ಯಾತ್ಯಭಿತ್ತಿಯಂತ್ರ ಮುಂತಾದವುಗಳು. ಉಜ್ಜಯನಿಯಲ್ಲಿ ಧಾರ್ಮಿಕ ಹಾಗೂ ತಾಂತ್ರಿಕ ವಾತಾವರಣ ತಲೆಎತ್ತಿ ನಿಂತಿರುವುದು.

ಇಲ್ಲಿಯ ಮಹಾಕಾಲೇಶ್ವರನ ವೈಶಿಷ್ಠವೆಂದರೆ, ಇದರ ಪರಿಸರ ವಲ್ಲೆಲ್ಲಿಯೂ ಅಣು ಸ್ಫೋಟವು ಎಂದೂ ಸಂಭವಿಸದಿಲ್ಲವೆಂದು ಧೃಡನಂಬಿಕೆ.

ಮಹಾಕಾಲೇಶ್ವರನ ಮೂಲ ಉದ್ದೇಶ; " ರಾಕ್ಷಸರ ಸಂಹಾರ "
**(Distruction of Demons)**

"ಆಕಾಶೆ ತಾರಕಂ ಲಿಂಗಂ ಪಾತಾಲೆಹಾಟಕೇಶ್ವರಂ
ಮೃತ್ಯು ಲೋಕೆ ಮಹಾಕಾಲಂ ಲಿಂಗತ್ರಯ ನಮೋಸ್ತುತೆ"॥

( ಸ್ವರ್ಗಲೋಕದಲ್ಲಿ ತಾರಕೇಶ್ವರ ಲಿಂಗ, ಪಾತಾಳ ಲೋಕದಲ್ಲಿ ಹಾಟಕೇಶ್ವರಲಿಂಗ, ಮತ್ತು ಮೃತ್ಯು ಲೋಕದಲ್ಲಿ ಮಹಾಕಾಲೇಶ್ವರ ಲಿಂಗ ಈ ಮೂರೂ ಲಿಂಗಗಳ ಉಪಾಸನೆಯನ್ನು ಮಾಡಬೇಕು.)

ತ್ರಿಲೋಕದಲ್ಲಿಯೇ ಪ್ರಸಿದ್ಧಿಯನ್ನು ಪಡೆದಂಥ ಲಿಂಗಗಳಲ್ಲಿ ಈ ಮಹಾಕಾಲೇಶ್ವರ ಲಿಂಗವು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದೆಂದೂ ಮಹತ್ವವನ್ನು ಪಡೆದಿರುವುದು.

ಈ ಮಹಾಕಾಲೇಶ್ವರನ ಮಂದಿರದ ಪರಿಸರದಲ್ಲಿ ಇನ್ನೂ ಅನೇಕ ಮಂದಿರಗಳು ನೋಡತಕ್ಕಂಥವುಗಳಿರುವವು. ಅವುಗಳಲ್ಲಿ ಈ ಕೆಳಗಿನವುಗಳನ್ನು ಸೂಚಿಸಬಹುದು.

## ೧. ಹರಿಸಿದ್ಧಿ ದೇವಿ ಮಂದಿರ :

ಈ ಮಂದಿರದಲ್ಲಿ ಮೂರ್ತಿ ಇರದಿದ್ದರೂ ಪಾಣೀ ಪೀಠದ ಮೇಲೆ ಶಿಲೆಯೊಂದಿದ್ದು ಅದರ ಮೇಲೆ ಶ್ರೀಚಕ್ರವನ್ನು ಕೆತ್ತಿರುವರು. ರಾಜಾ ವಿಕ್ರಮಾದಿತ್ಯನು ಈ ಸ್ಥಳದಲ್ಲಿ ಉಗ್ರತಪಸ್ಸು ಮಾಡಿದನಂತೆ. ಸನಿಹದಲ್ಲಿ ಅನ್ನಪೂರ್ಣಾದೇವಿಯ ಮೂರ್ತಿ ಮಾತ್ರ ಒಂದಿದೆ.

## ೨. ಶ್ರೀಗೋಲ ಮಂದಿರ :

ಕರಿಯ ಶಿಲೆಯ ಈ ಸುಂದರ ಮಂದಿರವನ್ನು ಮಹಾರಾಜಾ ಶಿಂಧೆ ಎನ್ನುವವರ ಪತ್ನಿ ಬಾಯಿಜಾಬಾಯಿ ಎಂಬುವಳು ಊರ ಮಧ್ಯದಲ್ಲಿ ಕಟ್ಟಿಸಿರುವಳು, ಇದೊಂದು ವಿಶೇಷ ಕಲಾಕೃತಿಯ ಸೌಂದರ್ಯವನ್ನು ಹೊರಸೂಸುವ ಮಂದಿರ, ಈ ಮಂದಿರದಲ್ಲಿ ಶ್ರೀ ಗೋಪಾಲಕೃಷ್ಣನ ಮೂರ್ತಿಯಲ್ಲದೆ; ರಾಧಾ, ಶಂಕರ. ಗರುಡ ಇವರ ವಿಗ್ರಹಗಳೂ ಉಂಟು. ಅಲ್ಲದೆ ಈ ಮಂದಿರವನ್ನು ಕಟ್ಟಿಸಿದ ಬಾಯಿಜಾಬಾಯಿಯ ಸಂಗಮರವರೀ ಕಲ್ಲಿನ ಮೂರ್ತಿಯೂ ಇದೆ.

## ೩. ಮಹಾಕಾಲಿ ಮಂದಿರ

ಕವಿಕಾಲಿದಾಸನು ಈ ಮಹಾಕಾಲಿಯ ಉಪಾಸನೆಯನ್ನು ಮಾಡಿ ಸಿದ್ಧಿ ಪಡೆದು ಅವಳ ಅನುಗ್ರಹದಿಂದ ಮಹಾ ಪಂಡಿತನಾದನು. ಈ ದೇವಿಯ ಧ್ಯಾನ ಅತ್ಯಂತ ಉಗ್ರ. ಇವಳು ಚಾಮುಂಡಿ. ಉಗ್ರಮೂರ್ತಿಯಾದ ರುದ್ರನಿಗಿಂತಲೂ ಹೆಚ್ಚೆಂದು ತಿಳಿಯುವರು. ಅದಕ್ಕೆ ಇವಳನ್ನು ಮಹಾಕಾಲಿಯೆಂದೂ ಕರೆಯುವರು. ಕಾಲಿದಾಸನು ಇವಳ ಷಮ್ಮುಖದಲ್ಲಿಯೇ ತನ್ನ ನಾಲಿಗೆಯನ್ನು ಕಿತ್ತು ಇತ್ತನೆಂದೂ, ದೇವಿಯ ಅನುಗ್ರಹದಿಂದ ಮತ್ತೆ ಪಡೆದನೆಂದೂ ಹೇಳುವರು.

೪) ಈ ಪರಿಸರದ ಸನೀಹದಲ್ಲಿಯೇ ಸಾಂದೀಪ ಮುನಿಗಳ ಆಶ್ರಮ. ಈ ಆಶ್ರಮದಲ್ಲಿ ಬಲರಾಮ, ಕೃಷ್ಣ ಮತ್ತು ಸುದಾಮರು ಶಿಕ್ಷಣ ಪಡೆದರಂತೆ. ಆಶ್ರಮದಲ್ಲಿರುವವರೆಗೂ ತಮ್ಮ ಓದು ಬರಹದೊಂದಿಗೆ ಅಡವಿಗೆ ಹೋಗಿ ಕಟ್ಟಿಗೆಯನ್ನು ತಂದು ಗುರು ಪತ್ನಿಗೆ ನೆರವಾಗುತ್ತಿದ್ದರು. ಶಿಕ್ಷಣವು ಮುಗಿದ ನಂತರ ಗುರುದಕ್ಷಿಣೆಯನ್ನು ಕೊಡುವುದೊಂದು ಸಂಪ್ರದಾಯ. ಸಾಂದೀಪ ಮುನಿಗಳ ಮಗನನ್ನು ರಾಕ್ಷಸರು ಹೊತ್ತುಕೊಂಡು ಹೋಗಿ ಯಾರಿಗೂ ತಿಳಿಯದ ಸ್ಥಳದಲ್ಲಿ ಇಟ್ಟಿದ್ದರು. ಬಲರಾಮ-ಕೃಷ್ಣ-ಸುದಾಮ ಈ ಮೂವರೂ ಆ ರಾಕ್ಷಸನಿಂದ ಬಿಡಿಸಿ ಗುರುಗಳ ಮಗನನ್ನು ತಿರುಗಿ ತಂದೊಪ್ಪಿಸಿದರು. ಇದುವೇ ಗುರುದಕ್ಷಿಣೆಯೆಂದು ಗುರುದಂಪತಿಗಳು ಸಂತುಷ್ಟರಾದರು.

ಕನ್ನಡದ ಪದ್ಯರೂಪದಲ್ಲಿ ಶ್ರೀ ಮಹಾಕಾಲೇಶ್ವರನ ನೆನಪು ತಂದಿರುವೆ.

## ಶ್ರೀ ಮಹಾಕಾಲೇಶ್ವರ

ಉಜ್ಜಯಿನಿಯಾವಾಸ ಮಹಕಾಲ ಲಿಂಗೇಶ
ದುರ್ಜನರ ಸಂಹರಿಪ ರಕ್ಕಸರ ಕುಲಕಂಟ
ಸಜ್ಜನರ ವರದಾತ ಭಸ್ಮಧಾರತಿ ಪ್ರಿಯ
ಮಜ್ಜನವ ಗೈಯ್ಯುವೆನು ನಿನ್ನಡಿಯ ಕಮಲಕ್ಕೆ ॥೧॥

ಆಗಸದ ಮಂಡಲದಿ ತಾರಕೇಶ್ವರಲಿಂಗ
ಪಾತಾಳದಡಿಯಲ್ಲಿ ಹಾಟಕೇಶ್ವರಲಿಂಗ
ಮೃತ್ಯುಲೋಕಕೆ ಬಂದ ಮಹಾಕಾಲೇಶ್ವರನು
ನಮಿಸುವೆನು ನಿಮ್ಮನ್ನು ಪೊಡಮಟ್ಟು ತನುಮನದಿ ॥೨॥





ಶ್ರೀ ಮಮಲೇಶ್ವರ

# ೬. ಶ್ರೀ ಓಂಕಾರೇಶ್ವರ



ಭಾರತ ಮಾತೆಯ ನಡುಕಟ್ಟು ಭೂಷಣವೆಂದೂ, ಹಣೆಯ ತಿಲಕವೆಂದೂ ಲೋಕ ಮಾತೆಯಂತಿರುವ, ಪೂರ್ವ–ಪಶ್ಚಿಮ ವಾಹಿನಿಯಾದ ನರ್ಮದೆಯು ಮಧ್ಯಪ್ರದೇಶದ ವಿಂಧ್ಯಾಚಲ ಪರ್ವತದಿಂದ ಹರಿದು ಬರುವಳು ಇವಳು ಮಹಾಗಂಭೀರವಾದ ವಿಪುಲ ಜಲರಾಶಿಯನ್ನು ಭೂಮಿಯಲ್ಲಿ ಹರಿಸಿ ಸಕಲ ಪಾಪಕರ್ಮಗಳನ್ನು ಪರಿಹರಿಸುತ್ತಿರುವಳು ನರ್ಮದಾ ನದಿಯ ದಡದಲ್ಲಿ ದೊರಕುವ ಶಾಲಿಗ್ರಾಮದಂತೆ ನುಣುಪಾದ ಬೆಣಚುಕಲ್ಲುಗಳು ಲಿಂಗದಂತೆ ಕಂಡು ಬರುವವು, ಈ ನದಿಯನ್ನು 'ಶಂಕರೀ' ನದಿಯೆಂದೂ ಕರೆಯುವರು.

ಮೊದಲು ಮಾಳವಾ ಎಂದು ಕರೆಯಲ್ಪಡುತ್ತಿದ್ದ ಈಗಿನ ಮಧ್ಯಪ್ರದೇಶದ ಪಶ್ಚಿಮ ದಿಕ್ಕನಲ್ಲಿರುವ ಖಂಡವಾ ಎಂಬ ಜಿಲ್ಲೆಯಲ್ಲಿ ಈ ಓಂಕಾರೇಶ್ವರ ಕ್ಷೇತ್ರವಿರುವುದು ನರ್ಮದಾನದಿಯ ದಡದಲ್ಲಿ. ಈ ಸ್ಥಳದಲ್ಲಿ ನರ್ಮದಾ ನಗಿಯ ಪ್ರವಾಹದ ನಿಸರ್ಗವು "ಓಂ" ಎಂಬ ಆಕಾರವನ್ನಿತ್ತಿದೆ. ಅದಕ್ಕೆ ಇಲ್ಲಿಯ ಈಶ್ವರ ಲಿಂಗವನ್ನು ಓಂಕಾರೇಶ್ವರನೆಂದು ಕರೆದಿರುವರು. ಈ ಕ್ಷೇತ್ರವು ಇಂದೂರು ಪಟ್ಟಣದಿಂದ ಸುಮಾರು ೮೦ ಕಿ.ಮಿ. ದೂರದಲ್ಲಿದೆ.

ನರ್ಮದೆಯೂ ಗಂಗೆಯಷ್ಟೇ ಪವಿತ್ರಳೆಂದು ಪ್ರತೀತಿ. ನರ್ಮದಾ ನದಿಯ ದರ್ಶನ ಮಾತ್ರದಿಂದಲೇ ಪುಣ್ಯಪ್ರಾಪ್ತವಾಗುವುದೆಂದು ಹೇಳುವರು ಆಷಾಢ ಮಾಸದ ಅಮಾವಾಸ್ಯೆಯಂದು (ನಾಗರಮಾಸಿ) ಲಕ್ಷಗಟ್ಟಲೆ ಭಕ್ತರು ಬಂದು, ಈ ಸ್ಥಳದ ನರ್ಮದಾ ನದಿಯಲ್ಲಿ ಮಿಂದು, ಓಂಕಾರೇಶ್ವರನ ದರ್ಶನ ಪಡೆದು ಪುನೀತರಾಗುವರು. ಈ ಅಮಾವಾಸ್ಯೆಗೆ 'ಸೋಮಾವತಿ' ಅಮಾವಾಸ್ಯವೆಂದೂ ಕರೆಯುವರು. ಅಂದು ಓಂಕಾರೇಶ್ವರನ ದೀಪಾರಾಧನೆಗೆ ಬಹಳ ಮಹತ್ವ.

ಈ ಸ್ಥಳದ ಪರಿಸರವು ನಿಸರ್ಗ ನಿರ್ಮಿತ. ಸೃಷ್ಟಿ ಸೌಂದರ್ಯದ ನೆಲೆಬೀಡು. ಇದೊಂದು ಸೌಂದರ್ಯೋಪಾಸಕರಿಗೆ ಹೇಳಿ ಮಾಡಿಸಿದ ತಾಣ. ಭಕ್ತರಿಗೆ ಭಾವವುಕ್ಕಿ ಬರುವ ಪರಂಧಾಮ.

## ಪೌರಾಣಿಕ ಹಿನ್ನೆಲೆ :

೧) ಪೂರ್ವಕಾಲದಲ್ಲಿ ಒಮ್ಮೆ ನಾರದರು ವಿಂಧ್ಯಾದ್ರಿಯಲ್ಲಿ ಶಿವಧ್ಯಾನದಲ್ಲಿ ನಿರತರಾದಾಗ,ವಿಂಧ್ಯಪರ್ವತನು ನಾರದರಲ್ಲಿಗೆ ಬಂದು; ಜಗತ್ತಿನಲ್ಲಿಯೇ ತನ್ನಂಥ ಶ್ರೇಷ್ಠ ಪರ್ವತ ಮತ್ತಾವುದೂ ಇಲ್ಲವೆಂದು ಜಂಭಕೊಚ್ಚಿಕೊಂಡನು. ಇದನ್ನು ಕೇಳಿದ ನಾರದರು; ಅವನ ಮಾತನ್ನು ಖಂಡಿಸಿ, ಅವನಿಗಿಂತಲೂ ಶ್ರೇಷ್ಠ ಮೇರು ಪರ್ವತವೆಂದು ಹೇಳಿದರು. ಇದರಿಂದ ವಿಂಧ್ಯನು ಖಿನ್ನನಾಗಿ ತನ್ನ ದುರಹಂಕಾರವನ್ನು ಬದಿಗೊತ್ತಿ. ಅಲ್ಲಿಯೇ ಇದ್ದ ನರ್ಮದಾ ನದಿಯ ದಡದಲ್ಲಿ ಕುಳಿತು ಶಿವನನ್ನು ಕುರಿತು ತಪಸ್ಸು ಮಾಡಿದನಂತೆ. ಈಶ್ವರನು ಆತನ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿ ಆತನನ್ನು ಅನುಗ್ರಹಿಸಿದನು. ಆಗ, ದೇವತೆಗಳು, ಋಷಿಗಳು ಕೂಡಿ ಅದೇ ಸ್ಥಳದಲ್ಲಿಯೇ ನೆಲೆಯೂರುವಂತೆ ಈಶ್ವರನನ್ನು ಬೇಡಿಕೊಳ್ಳಲು, ಅವರೆಲ್ಲರ ಅಪೇಕ್ಷೆಯ ಮೇರೆಗೆ ಶಿವನು ಲಿಂಗರೂಪಿಯಾಗಿ "ಓಂಕಾರೇಶ್ವರ" ನೆಂದು ನಾಮ ಧ್ಯೇಯನಾಗಿ ನಿಂತನು. ಈಶ್ವರನು ವಿಂಧ್ಯಪರ್ವತನಿಗೆ ಪ್ರತ್ಯಕ್ಷನಾದ ವಿಂಧ್ಯಾದ್ರಿಯ ಅಡಿಯಲ್ಲಿ ಹರಿಯುವ ನರ್ಮದಾನದಿಯ ದಡದಲ್ಲಿಯೇ ಓಂಕಾರೇಶ್ವರ ದೇವಾಲಯವನ್ನು ಕಟ್ಟಿರುವರು.

೨) ಪ್ರಾಚೀನ ಕಾಲದಲ್ಲಿ ದೈತ್ಯರು ದೇವತೆಗಳನ್ನು ಪರಾಜಯಗೊಳಿಸಿ ಇಂದ್ರನನ್ನು ಹತಬಲನನ್ನಾಗಿ ಮಾಡಿದರು. ಮೂರು ಲೋಕಗಳ ತುಂಬೆಲ್ಲ ರಾಕ್ಷಸರ ಉಪಟಳ ಮೇರೆ ಮೀರಿತು. ಇದನ್ನರಿತ ಮಹಾದೇವನು ದಿವ್ಯ ಜ್ಯೋತಿರ್ಮಯವಾದ ಓಂಕಾರೇಶ್ವರ ರೂಪವನ್ನು ಧರಿಸಿ ನರ್ಮದಾ ನದಿಯ ತಟಾಕದಲ್ಲಿ ಪ್ರಕಟವಾಗಲು ದೇವತೆಗಳೆಲ್ಲರೂ ಆತನ ಆರಾಧನೆ

ಯನ್ನು ಮಾಡಿದರು. ಆ ಅಮರೇಶ್ವರ ಕೃಪೆಯಿಂದ ದೇವತೆಗಳಿಗೆ ಪುನಃ ಬಲಪ್ರಾಪ್ತವಾಗಿ ದೈತ್ಯರನ್ನು ನಾಶಮಾಡಿ ಪುನಃ ಸ್ವರ್ಗದ ಅಧಿಪತ್ಯವನ್ನು ಪಡೆದರು. ಈ ಪರಿ ಶಿವನು ಪ್ರಕಟನಾಗಿ ಲಿಂಗರೂಪದಲ್ಲಿ ಐಕ್ಯನಾಗಿ ಇಲ್ಲಿ ನಿಂತಿರುವನು.

ಈ ಓಂಕಾರ ಮಮಲೇಶ್ವರ ಜ್ಯೋತಿರ್ಲಿಂಗದ ಸ್ಥಳದಲ್ಲಿ ಬ್ರಹ್ಮ, ವಿಷ್ಣು ಅವರು ಬಂದು ವಾಸ್ತವ್ಯ ಮಾಡಿದ ನಿಮಿತ್ತ ನರ್ಮದಾ ನದಿಯ ದಡದಲ್ಲಿ ; ಬ್ರಹ್ಮಪುರಿ, ವಿಷ್ಣುಪುರಿ ಮತ್ತು ರುದ್ರಪುರಿ ಎಂದು ತ್ರಿಪುರ ಕ್ಷೇತ್ರಗಳಿವೆ. ರುದ್ರಪುರಿಯಲ್ಲಿ ಮಮಲೇಶ್ವರ ಜ್ಯೋತಿರ್ಲಿಂಗವಿದೆ. ಓಂಕಾರೇಶ್ವರನಿಗೆ ಮಮಲೇಶ್ವರನೆಂದೂ ಕರೆಯುವರು.

ಪುರಾಣಕಾಲದಲ್ಲಿ ಯುವನಾಶ್ವ ಪುತ್ರ ಮಾಂಧಾತಾನೆಂಬವನು ಇಂದ್ರನ ಕೃಪೆಯಿಂದ ಈ ಸ್ಥಳದಲ್ಲಿ ಪ್ರಸಿದ್ಧ ರಾಜನಾಗಿ ಹೋದನು. ಆತನು ಶಂಕರನ ಸೇವೆಯನ್ನು ಮನಃಪೂರ್ವಕ ಮಾಡಿದ ನಿಮಿತ್ತ ಪರಮೇಶ್ವರನು ಪ್ರಸನ್ನನಾಗಿ ಆತನನ್ನು ಅನುಗ್ರಹಿಸಿದನಂತೆ.

ಮಾಂಧಾತಾರಾಜನು ತನ್ನ ರಾಜಧಾನಿಯನ್ನು ಇಲ್ಲಿಯೇ ಮಾಡಿದ್ದ-ನಂತೆ. ಅದಕ್ಕಾಗಿ ಈ ಕ್ಷೇತ್ರವನ್ನು ಓಂಕಾರ ಮಾಂಧಾತಾ ಎಂದೂ ಕರೆಯುವರು. ಮಾಂಧಾತಾ ವಂಶಜರು ಈಗಲೂ ಈ ಕ್ಷೇತ್ರದಲ್ಲಿರುವರು.

### ಐತಿಹಾಸಿಕ ಹಿನ್ನೆಲೆ :

ಈ ಭಾಗದ ವಿಂಧ್ಯಾಗಿರಿ ಪರ್ವತದ ಪ್ರದೇಶದಲ್ಲಿ ಆದಿವಾಸಿ ಜನರು ಬಹಳಷ್ಟು ಜನರು ವಾಸವಾಗಿದ್ದಾರೆ. ಇವರು ಕಾಲೀಮಾತೆಯ ಉಪಾಸಕರು. ನರಬಲಿಯನ್ನು ಕೊಡುತ್ತಿದ್ದರು. ಬಂದ ಯಾತ್ರಿಕರಿಗೂ ತ್ರಾಸ ಕೊಡು-ತ್ತಿದ್ದರು. ಬರಬರುತ್ತ ದರಯಾಯೀನಾಥನೆಂಬ ಓರ್ವ ಸಿದ್ಧ ಪುರುಷನು ಬಂದು ಸ್ಥಳ ಊರಿ ಆ ಭೈರವಗಣದ ಹುಟ್ಟಡಗಿಸಿದನು. ಅಂದಿನಿಂದ ಬಂದು ಹೋಗುವ ಯಾತ್ರಿಕರ ಭಯ ನಿವಾರಣವಾಯಿತು.

ತದನಂತರ ಭಿಲ್ಲರ ರಾಜ್ಯ ಪ್ರಾರಂಭವಾಯಿತು. ೧೧೯೫ ರಲ್ಲಿ ಭಾರತಸಿಂಹ ಚವ್ಹಾಣ ಎಂಬ ರಾಜನು ಈ ಭಿಲ್ಲರ ರಾಜ್ಯವನ್ನು ಕಸಿದು-ಕೊಂಡು ಓಂಕಾರ ಮಾಂಧಾತ ಕ್ಷೇತ್ರದ ವೈಭವವನ್ನು ಮತ್ತಷ್ಟು ಬೆಳೆಸಿದನು. ಈ ಚವ್ಹಾಣರಾಜನ ರಾಜವಾಡೆಯು ಇನ್ನೂ ಉಂಟು ಮತ್ತು ಈ ರಾಜನ ವಂಶಜರು 'ರಾಜಾ' ಎಂಬ ಬಿರುದಿನೊಂದಿಗೆ ತಮ್ಮ ಹೆಸರನ್ನು ಉಳಿಸಿ-ಕೊಂಡು ಬಂದಿರುವರು.

ಎರಡನೆಯ ಬಾಜೀರಾವ ಪೇಶ್ವೆಯು ಇಲ್ಲಿಯ ಪುರಾತನ ಮಂದಿರದ ಜೀರ್ಣೋದ್ಧಾರ ಮಾಡಿದನು. ತದನಂತರ ಅಹಲ್ಯಾಬಾಯಿ ಹೋಳಕರ ಇವರು ಶಿಥಿಲವಾದ ಮಂದಿರದ ಭಾಗವನ್ನು ದುರಸ್ತಿ ಮಾಡಿಸಿ, ಭವ್ಯ ಸುಂದರವಾದ ಘಾಟೊಂದನ್ನು ನದಿಗೆ ಕಟ್ಟಿಸಿದರು. ಮತ್ತು ಕೋಟಿ ಲಿಂಗಾರ್ಚನೆಯ ಪದ್ಧತಿಯನ್ನು ಜಾರಿಗೆ ತಂದರು. ಕೋಟಿ ಲಿಂಗಾರ್ಚನೆ ಎಂದರೆ, ಇಪ್ಪತ್ತೆರಡು ಭೂಸುರರ ಕೈಯಲ್ಲಿ ೧೩೦೦ ಕಟ್ಟಿಗೆಯ ತುಂಡು-ಗಳನ್ನು ತೆಗೆದುಕೊಂಡು ಅವುಗಳಲ್ಲಿ ಮಣ್ಣಿನ ಪಾರ್ಥಿವ ಲಿಂಗಗಳನ್ನಿಟ್ಟು ಪೂಜೆಯನ್ನು ಮಾಡಿದ ನಂತರ ಆ ಲಿಂಗಗಳನ್ನು ನರ್ಮದಾ ನದಿಯ ಪ್ರವಾಹ ದಲ್ಲಿ ವಿಸರ್ಜನೆ ಮಾಡುವುದು. ನಿತ್ಯ ನೇಮದಿಂದ ಕೂಡಿದ ಈ ಕೋಟಿ ಲಿಂಗಾರ್ಚನೆಯು ವರ್ಷ ಪರ್ಯಂತವೂ ನಡೆದಿರುತ್ತದೆ.

೧೯೦೫ ರಲ್ಲಿ ಆಗಿನ ಭಾರತದ ವಾಯಿಸರಾಗಿದ್ದ ಲಾರ್ಡ ಕರ್ಝನ್‌ನು ಈ ಜ್ಯೋತಿರ್ಲಿಂಗ ಕ್ಷೇತ್ರಕ್ಕೆ ಬಂದ ಸಮಯದಲ್ಲಿ ಇಲ್ಲಿಯ ಪುರಾತನ ವೈಭವ ವನ್ನು ಹಾಗೂ ರಮಣೀಯ ಸೃಷ್ಟಿ ಸೌಂದರ್ಯವನ್ನು ನೋಡಿ ಸ್ತಂಭೀ-ಭೂತನಾದನಂತೆ.

ಈ ಕ್ಷೇತ್ರದ ಪರಿಸರದಲ್ಲಿ ಅನೇಕ ಮಂದಿರಗಳಿವೆ. ಅವುಗಳಲ್ಲಿಯ ಕೆಲವೊಂದು ಸೂಚಿಸಲಾಗಿದೆ.

## ೧) ಸಿದ್ಧನಾಥ ಮಂದಿರ :

ಈ ಮಂದಿರವು ಪ್ರಾಚೀನ ವಾಸ್ತುಶಿಲ್ಪಕಲಾ ಚತುರತೆಯ ಒಂದು ಅತ್ಯಂತ ಸುಂದರ ದ್ಯೋತಕ. ವಿಶಾಲವಾದ ನಾಲ್ಕೂ ಬದಿಯ ಪ್ರಾಂಗಣದಲ್ಲೆಲ್ಲ ಐದು ಅಡಿ ಎತ್ತರದ ಒಂದೇ ಬಗೆಯ ಆನೆಗಳನ್ನು ಕೊಡಿಸಿರುವರು. ಈ ಶಿಲಾ ಆನೆಗಳ ವಿಗ್ರಹಗಳ ಕ್ರೀಡೆಯ ನೋಟ ನೋಡತಕ್ಕಂತಹುದು.

## ೨) ಗೌರಿ ಸೋಮನಾಥ ಮಂದಿರ :

ನಕ್ಷತ್ರುದಾಕಾರ ದಾಕೃತಿಯಲ್ಲಿ ಕಟ್ಟಿದ ವಿಶಾಲವಾದ ಅತ್ಯಂತ ಪ್ರಾಚೀನ ಮಂದಿರ, ಗಂಡಕಿ ನದಿಯ ಸ್ಪಟಿಕ ಶಿಲೆಯ ಪ್ರಚಂಡ ಶಿವಲಿಂಗವು ಈ ಮಂದಿರದಲ್ಲಿದೆ. ಜನರು ಈ ಲಿಂಗವನ್ನು "ಮಾವಶಾಬಾಧ್ಯಂ ತ್ವಾ ಚಕ ವೇತ ಹೀ ಪಿಂಡ ಭಾವತೆ," ಇಂತಹುದು ಎಲ್ಲಿಯೂ ಇಲ್ಲ.

ಇದೊಂದು ಶೈವ ಕ್ಷೇತ್ರ ತೀರ್ಥ. ಅತಿ ಸುಂದರ ರಮ್ಯತಾಣ. ಆದಿ ಶಂಕರಾಚಾರ್ಯರು ತಮ್ಮದೊಂದು ಶ್ಲೋಕದಲ್ಲಿ ಈ ರೀತಿ ಹೇಳಿರುವರು.
"ಕಾವೇರಿಕಾ ನರ್ಮದಾಯೋಃ ಪವಿತ್ರೆ ಸಮಾಗಮೆ ಸಜ್ಜನ ತಾರಣಾಯ ।
ಸದೈವ ಮಾಂಧಾತು ಪುರೆ ವಸಂತ ಓಂಕಾರಮೀಶಂ ಶಿವಮೇಕ ಮೀಡ" ॥

( ಸಜ್ಜನರು ದಾಟುವದಕ್ಕೋಸ್ಕರ ಕಾವೇರಿ ಮತ್ತು ನರ್ಮದಾ ಇವರ ಸಂಗಮದಲ್ಲಿ ನಿತ್ಯವೂ ವಾಸಮಾಡುತ್ತಿರುವ ಓಂಕಾರೇಶ್ವರನಿಗೆ ನಮಸ್ಕಾರಗಳು. )

" ರುದ್ರುಭೀಷ್ಟಂ ಫಲಂ ತತ್ರ ಪ್ರಾಪ್ನುಯಾನ್ನಾತ್ರ ಸಂಶಯಃ ।
ಏತತೆ ಸರ್ವಮಾಖ್ಯಾತ ಮೋಂಕಾರ ಪ್ರಭುವೇ ಫಲಂ "॥

( ತತ್ವಯುತವಾದ ಮಹತಿಯನ್ನು ಕೊಂಡಾಡುವುದಾಗಲಿ, ಶ್ರವಣ ಮಾಡುವುದಾಗಲೀ ಓಂಕಾರೇಶ್ವರ ಪ್ರಭುವಿನ ಫಲ. )

ಪದ್ಯದಲ್ಲಿ ಶ್ರೀ ಓಂಕಾರೇಶ್ವರನನ್ನು ನೆನೆದಿರುವೆ

## ಶ್ರೀ ಓಂಕಾರೇಶ್ವರ

ವಿಂಧ್ಯಾಚಲದಡಿ ಜುಳುಜುಳು ಹರಿಯುವ
ಪಶ್ಚಿಮ ವಾಹಿನಿ ನರ್ಮದೆ ನಿರ್ಮಿಸಿ
ಅಚ್ಚರಿ ಪಡುವೊಲು ಸೃಷ್ಟಿಯು "ಓಂ" ಮನು
ನಿಶ್ಚಲ ಲಿಂಗಕೆ ಜ್ಯೋತಿಯು ಬಂದಿತು ॥೧॥

ಕಾವೇರಿ ನರ್ಮದಾ ಸಂಗಮದ ಪರಿಸರದಿ
ಭಾವೈಕ್ಯ ಮೂಡಿಸುತ ವಾಸಿಸುವ ಓಂಕಾರ
ಲಿಂಗಕ್ಕೆ ನಮಿಸುವರು ಸಜ್ಜನರು ದಿನನಿತ್ಯ
ಮಂಗಳವ ಹಾಡುತ್ತ ಓಂಕಾರ ಈಶ್ವರಗೆ ॥೨॥





ಶ್ರೀ ವೈಜನಾಥ

# ೫. ಶ್ರೀ ವೈಜನಾಥ

ಕರುಣಿಸಿದ ಕರಾರುಗಳುಳ್ಳ ವರಾನುಗ್ರಹ(Conditional granting of Boons)ಎಂಬುದು ಮೂಲ ವಕ್ಕಣಿಕೆ ಈ ಜ್ಯೋತಿರ್ಲಿಂಗದ್ದು.

ಕನ್ಯಾಕುಮಾರಿಯಿಂದ ಉಜ್ಜಯಿನಿಯ ಭೂಮಧ್ಯ ರೇಖೆಯಲ್ಲಿ 'ಪರಳಿ' ಎಂದೊಂದು ಊರು. ಮಹಾರಾಷ್ಟ್ರದ ಭೀಡ ಜಿಲ್ಹೆಯಲ್ಲಿ ಬರುವುದು. ಮೇರು ಪರ್ವತ ಅಥವಾ ನಾಗನಾರಾಯಣ ಶಿಖರದಡಿಯಲ್ಲಿಯ ಇಳಿಜಾರಿನಲ್ಲಿ ಬ್ರಹ್ಮ, ವೇಳಾರಿ ಮತ್ತು ಸರಸ್ವತಿ ಈ ಮೂರು ನದಿಗಳು ಸಂಗಮಿಸುವಲ್ಲಿ ಈ ವೈಜನಾಥನು ನಿಂತಿರುವನು. ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಈ ವೈಜನಾಥನು ಒಂದು. ಈ ಕ್ಷೇತ್ರವನ್ನು ಕಾಂತಿಪುರಿ, ಮಧ್ಯರೇಖಾ, ವೈಜಯಂತು ಹಾಗೂ ಜಯಂತಿ ಎಂದೂ ಕರೆಯುವ ರೂಢಿಯುಂಟು. ಈ ಸ್ಥಳದಲ್ಲಿ ಶಂಕರನು ಪಾರ್ವತಿ ಸಹಿತವಾಗಿ ವಾಸಿಸಿರುವನು. ಇದೊಂದು ಮತ್ತೊಂದು ಕಾಶಿಯೆಂದೂ ಪರಿಗಣಿಸಲ್ಪಟ್ಟಿದೆ. ಈ ಕ್ಷೇತ್ರದ ಯಾತ್ರೆಯನ್ನು ಮಾಡುವುದೆಂದರೆ ಕಾಶಿ ಯಾತ್ರೆಯನ್ನೇ ಮಾಡಿದಂತೆಂದು ಹೇಳುವರು.

ಇಲ್ಲಿ ಸಮೃದ್ಧ ಜಲ ಸಂಪತ್ತು, ಉತ್ತಮ ಹವಾಗುಣ. ಫಲವತ್ತಾದ ಭೂಮಿ ಇವುಗಳಿಂದ ಫಲಭರಿತವಾದ ಧಾನ್ಯ ಸಂಪತ್ತಿನಿಂದ ಪರಳಿ ಗ್ರಾಮವು ವ್ಯಾಪಾರದ ಪಡಮೂಲೆ ಎನಿಸಿದೆ. ವಿದ್ಯುತ್ ನಿರ್ಮಾಣದ ಭವ್ಯಘಟಕ ವಂದಿದ್ದು ಜನವಸತಿಗೆ ಸಾಕಷ್ಟು ಅನುಕೂಲ ಸ್ಥಳ.

## ಪೌರಾಣಿಕ ಹಿನ್ನೆಲೆ :

ಇದೂ ಕೂಡ ಗೋಕರ್ಣದ ಕಥೆಯನ್ನೇ ಹೇಳುತ್ತದೆ. ಶಿವಲಿಂಗವನ್ನು ಪಡೆದುಕೊಂಡು ತರುವಾಗ ಆತನ ಸೂಚನೆ ಮೀರಿ ಬಾಲಕನ ಕೈಯ್ಯಲ್ಲಿಟ್ಟು

ತಿರುಗಿ ಬರುವಾಗಲೇ ಬಾಲಕ ಲಿಂಗವನ್ನು ಕೆಳಗಿಟ್ಟಿದ್ದರಿಂದ ಭೂಮಿಯಲ್ಲಿಯೇ ಲಿಂಗವು ಕೂತಿತು ಎಂಬುದು ಗೋಕರ್ಣದ ಕಥೆ.

೧) ಪ್ರಖ್ಯಾತ ಶಿವಭಕ್ತನಾದ ರಾವಣನು ಈಶ್ವರನ ಆತ್ಮಲಿಂಗವನ್ನು ಪಡೆದುಕೊಂಡು ಲಂಕೆಗೆ ಒಯ್ಯುವ ಸಮಯದಲ್ಲಿ 'ವೈಜು' ಎಂಬ ಹೆಸರಿನ ಗೋಪಾಲಕನ ವೇಷಧಾರಿಯಾದ ಗಣಪತಿಯು ಯುಕ್ತಿಯಿಂದ ರಾವಣನಿಂದ ಆತ್ಮಲಿಂಗವನ್ನು ಪಡೆದುಕೊಂಡು ಭೂಮಿಯಲ್ಲಿ ಇಟ್ಟು ಬಿಟ್ಟನು. ನಡು ಮಧ್ಯದಲ್ಲಿ ಎಲ್ಲಿಯೂ ಇಡಬಾರದೆಂದು ಶಿವನ ಆಜ್ಞೆ ಇದ್ದರೂ ಅದು ಫಲಿಸಲಿಲ್ಲ. ರಾವಣನು ತನ್ನ ಎಷ್ಟೇ ಬಲಪ್ರಯೋಗದಿಂದ ಕಿತ್ತಿದರೂ ಆತ್ಮಲಿಂಗವು ಭೂಮಿಯಿಂದ ಕಿತ್ತು ಬರಲೇ ಇಲ್ಲ. ಶಾಶ್ವತವಾಗಿ ದಿವ್ಯ ಜ್ಯೋತಿರ್ಲಿಂಗವಾಗಿ ಅಲ್ಲಿಯೇ ನಿಂತುಬಿಟ್ಟಿತು. ಆ ಸ್ಥಳವೇ ಪರಳಿ ಗ್ರಾಮದ ಪರಿಸರ. ಪಿಂಡದ ಎರಡನೆಯ ಭಾಗವು ಗೋಕರ್ಣದಲ್ಲಿದೆ. ಅದನ್ನು ರಾವಣನು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಕೀಳಲು ತಿರುಚಿದ್ದರಿಂದ ಆ ಆತ್ಮಲಿಂಗದ ಭಾಗವು ಆಕಳಕಿವಿಯಂತೆ ಮುರಿಗಿಯಾಗಿ ಉಳಿಯಿತೆಂದೂ ಅದಕ್ಕೆ ಆ ಕ್ಷೇತ್ರವನ್ನು 'ಗೋಕರ್ಣ' (ಗೊ = ಆಕಳಕರ್ಣ = ಕಿವಿ) ವೆಂದು ಕರೆದಿರುವರು. ವೈಜನೆಂಬ ಗೋಪಾಲಕನಿಂದ ಈ ಆತ್ಮಲಿಂಗವು ಪರಳಿಯಲ್ಲಿ ಉಳಿಯಿತೆಂದು ಈ ಜ್ಯೋತಿರ್ಲಿಂಗವನ್ನು ವೈಜನಾಥನೆಂದು ಕರೆದಿರುವರು.

ಮತ್ತೊಂದು ಕಥೆ ಇದೆ—

೨) ದೇವ ದಾನವರಿಂದ ಸಮುದ್ರಮಂಥನ ಮಾಡಲ್ಪಡುವಾಗ ಹೊರಟ ಹದಿನಾಲ್ಕು ರತ್ನಗಳಲ್ಲಿ ಧನ್ವಂತರಿ ಮತ್ತು ಅಮೃತ ಈ ರತ್ನಗಳೂ ಹೊರಬಂದವು. ರಾಕ್ಷಸರು ಅಮೃತವನ್ನು ಪಡೆಯುವುದಕ್ಕೋಸ್ಕರ ಗುದ್ದಾಡುವ ಸಮಯದಲ್ಲಿ ; ವಿಷ್ಣು ಅಮೃತಸಹಿತ ಧನ್ವಂತರಿಯನ್ನು ಶ್ರೀ ಶಂಕರನ ಪಿಂಡದಲ್ಲಿ ಬಚ್ಚಿಟ್ಟನು. ಅದಕ್ಕೆ ಆ ಲಿಂಗವನ್ನು 'ಅಮೃತೇಶ್ವರ' ಲಿಂಗವೆಂದೂ, 'ವೈದ್ಯನಾಥ' ಲಿಂಗವೆಂದೂ ಕರೆಯುವರು. ದೈತ್ಯರು ಅಮೃತದ ಆಶೆಗಾಗಿ ಈ ಲಿಂಗವನ್ನು ಮುಟ್ಟಲು ಪ್ರಯತ್ನಿಸಲಾಗಿ

ಮುಟ್ಟಲು ಅಮೃತಧಾರೆ ಸುರಿಯಿತಂತೆ. ಅಂತೆಯೇ ಈಗಲೂ ಲಿಂಗವನ್ನು ದರ್ಶಿಸಿ ಸ್ಪರ್ಶಿಸುವ ರೂಢಿಯುಂಟು. ಇಲ್ಲಿ ಜಾತಿಭೇದ, ಲಿಂಗಭೇದ, ಎಂಬ ಯಾವ ಭೇದವೂ ಇಲ್ಲ. ಯಾರೇ ಬಂದರೂ ಈ ಲಿಂಗಸ್ಪರ್ಶಕ್ಕೆ ಯಾವ ಅಡೆತಡೆಯೂ ಇರದು.

ಪರಳಿ ಗ್ರಾಮದ ಮಧ್ಯದಲ್ಲಿ ವೈಜನಾಥನ ಭವ್ಯ ಮಂದಿರವಿದೆ. ಒಳಭಾಗದ ವಿಶಾಲ ಪ್ರಾಂಗಣದಲ್ಲಿ ಬೃಹತ್ ದೀಪಸ್ತಂಭವಂದುಂಟು. ಮಹಾದ್ವಾರದ ಬದಿಯಲ್ಲಿ ಒಂದು ಕಿಂಡಿಯನ್ನು ಕೊರೆದಿರುವರು. ಅದನ್ನು ಗವಾಕ್ಷವೆಂದು ಕರೆದಿರುವರು. ಈ ದಿಶೆಯಿಂದ, ಚೈತ್ರ ಮತ್ತು ಆಶ್ವೀನ ಮಾಸಗಳ ವಿಶಿಷ್ಠ ದಿನಗಳಲ್ಲಿ ಸೂರ್ಯೋದಯದ ಸಮಯದಲ್ಲಿ ಮಂದಿರ-ದಲ್ಲಿದ್ದ ವೈಜನಾಥ ಲಿಂಗದ ಮೇಲೆ ಸೂರ್ಯನ ಕಿರಣಗಳು ಬೀಳುವವು. ಮಂದಿರವನ್ನು ಏರಿ ಇಳಿಯಲು ಕಲ್ಲಿನ ಪ್ರಶಸ್ತ ಪಾವಟಿಗೆಗಳುಂಟು. ಇದನ್ನು ಘಾಟವೆಂದು ಕರೆಯುವರು. ೧೧೭೮ ರಲ್ಲಿ ಇದನ್ನು ಕಟ್ಟಿಸಲಾಯಿತಂತೆ. ಇಲ್ಲಿ ಗೃಹಗರ್ಭ ಹಾಗೂ ಸಭಾಮಂಟಪಗಳು ಪಾತಾಳದಲ್ಲಿರುವುದರಿಂದ ಸಭಾ ಮಂಟಪದಲ್ಲಿಯೂ ದೇವರ ದರ್ಶನವನ್ನು ಪಡೆಯಬಹುದು. ಮತ್ತೆಲ್ಲಿಯೂ ಈ ಸೌಕರ್ಯವಿರದು. ವೈಜನಾಥ ಲಿಂಗವು ಶಾಲಿಗ್ರಾಮ ಶಿಲೆಯದಿದ್ದು ಅತ್ಯಂತ ಭವ್ಯ-ದಿವ್ಯ ಹಾಗೂ ಸುಂದರವಾಗಿಯೂ ಇರುವುದು. ಲಿಂಗದ ಪಾರ್ಶ್ವದಲ್ಲಿ ಪಾರ್ವತಿ ಇರುವಳು. ಗೃಹಗರ್ಭದಲ್ಲಿ ನಾಲ್ಕು ಕಡೆ ಅಖಂಡವಾಗಿ ನಂದಾದೀಪ ಉರಿಯುತ್ತಿರುತ್ತದೆ.

"ವೈದ್ಯಾಭ್ಯಾಂ ಪೂಜಿತಂ ಸತ್ಯಂ, ಲಿಂಗಮೇತತ್ ಪುರಾತನಂ ।
ವೈದ್ಯನಾಥಮಿತಿ ಪ್ರಖ್ಯಾತಂ, ಸರ್ವಕಾಮ ಪ್ರದಾಯಕಂ" ॥

ಪರಳಿಯ ಕ್ಷೇತ್ರದ ಸುತ್ತಮುತ್ತ ಅರಣ್ಯಭೂಮಿಯಲ್ಲಿ, ನದಿಗಳಲ್ಲಿ ನಾನಾತರದ ಉಪಯುಕ್ತ ಗಿಡಮೂಲಿಕೆಗಳು, ವನಸ್ಪತಿಗಳು ಸಾಕಷ್ಟು ಲಭ್ಯ. ಅದಕ್ಕೆಂದೇ ಈ ಕ್ಷೇತ್ರದ ಸ್ವಾಮಿಯನ್ನು ವೈದ್ಯನಾಥನೆಂದು ಕರೆದಿರುವರು.

" ಅತಃ ಪರಂ ಪ್ರವಕ್ಷ್ಯಾಮಿ ವೈದ್ಯನಾಥೇಶ್ವರಸ್ಯ ಹಿ ।
ಜ್ಯೋತಿರ್ಲಿಂಗಸ್ಯ ಮಹಾತ್ಮ್ಯಂ ಶ್ರೂಯತಾಂ ಪಾಪಹಾರಕಂ " ॥

( ವೈದ್ಯನಾಥ ಜ್ಯೋತಿರ್ಲಿಂಗದ ಮಹಿಮೆಯ ಕಥೆಯನ್ನು ಯಾವನು ಕೇಳುವನೋ ಅವನು ಸರ್ವಪಾಪಗಳಿಂದ ಮುಕ್ತನಾಗುವನು ).

ಜೊತೆಗೆ ಪದ್ಯದಲ್ಲೂ ಶ್ರೀ ವೈಜನಾಥನನ್ನು ಕಾಣಿಸಿರುವೆ.

## ಶ್ರೀ ವೈಜನಾಥ

ದರ್ಶನ ಪೂಜನ ಪಾಪವಿನಾಶನ
ಮಃರ್ಗವನರಿತಾ ಗುಣಯುತ ಭಕ್ತರು
ಭಕ್ತಿಯ ವರ್ಧನ ಮಾನುಷ ಮನಸಿಗೆ

ಭಾಗ್ಯವ ಪಡೆಯಲು ನುತಿಸಲು ಯುಕ್ತವು ॥೧॥
ಕಥೆಯನು ಕೇಳಿದ ವೈಜನ ಮಹಿಮೆಯ
ನಿತ್ಯದಿ ನಾಥನ ಸ್ಮರಣೆಯ ಮಾಡಲು
ಭೂಮಿಯ ತಲದಲಿ ವಾಸಿಪ ಜನರಿಗೆ
ಕಾಮಿತ ಫಲವನು ನೀಡುವ ಲಿಂಗವು ॥೨॥

ಪರಲಿ ಗ್ರಾಮದ ಜನರ ಮಧ್ಯದಿ
ವೈಜನಾಥನು ನಿಂತು ನಿತ್ಯದಿ
ಹರಕೆಯನ್ನನು ಹರಿಸುತಿರುವನು
ತೇಜ ಜ್ಯೋತಿಯ ಬೆಳಕನೀಯುತ ॥೩॥

— ● —



ಶ್ರೀ ಭೀಮಾ ಶಂಕರ

# ೬. ಶ್ರೀ ಭೀಮಾಶಂಕರ

ದುಷ್ಟ ಶಕ್ತಿಯ ದಮನ ( Couquest of Evil ) ಎಂಬುದು ಈ ಈಶ್ವರ ಲಿಂಗದ ಒಕ್ಕಣಿಕೆ.

"ಪಂಜರಾ ಭೀಮರಥ್ಯಾಚ ಕೃಷ್ಣಾವೇಣೀ ಬೃಹನ್ನದೀ ।
ಮಲಾಪಹಾರಿಣೀ ಯತ್ರ ಸಂಗಗತಾ ಲೋಕ ವಿಶ್ರುತಂ" ॥

—ಸೋಮೇಶ್ವರ ದೇವ

"ಭೀಮಾರ್ಥಾಲೀ ಚಂದ್ರಭಾಗಾ
ವಿಠಲ ಚರಣೀ ಚ ಗಂಗಾ" ॥

ಚಂದ್ರಭಾಗೆಯ ವಿಶಾಲ ತಟದಲ್ಲಿ ಪಾಂಡುರಂಗನಿಗೆ ಲಕ್ಷೋಪಲಕ್ಷ ವಾರಕರಿಯವರು ಆನಂದದಿಂದ ನರ್ತಿಸುವರು. ಭೀಮಾ-ಭಾಗಾ–ಗಂಗಾ ಇವರ ಪವಿತ್ರ ಜಲದಲ್ಲಿ ಮಿಂದು ಪಾವನರಾಗುವರು. ಭೀಮಾರಥಿ ಗಂಗಾ ನದಿಗಳು ಒಂದೇ ರೂಪಗಳು. ಅದಕ್ಕೆಂದೇ ಇವುಗಳಿಗೆ ಮಹತ್ವ.

ಭಾಗೀರಥಿ ಗಂಗಾ ಸ್ವರ್ಗದಿಂದ ಇಳಿದು ಬಂದ ನಂತರ ಶಂಕರನ ಜಡೆಯನ್ನು ಸೇರಿದರೆ, ಭೀಮಾರಥಿ ಗಂಗಾ ಶಿವನ ಮೈಯಿಂದ ಜಲರೂಪ ದಿಂದ ಅವತರಿಸಿದಳು. ಈ ಭೀಮಾನದಿಯ ಉಗಮ ಸ್ಥಾನ ಭೀಮಾಶಂಕರ ಕ್ಷೇತ್ರದಲ್ಲಿದೆ. ಅದಕ್ಕೆಂದೇ ಈ ಲಿಂಗವನ್ನು ಭೀಮಾಶಂಕರ ಲಿಂಗವೆಂದು ಅನ್ನುವರು.

ಮಹಾರಾಷ್ಟ್ರದ ಪುಣೆ ಜಿಲ್ಲೆಯಲ್ಲಿಬರುವ ಖೇಡ ಎಂಬ ತಾಲೂಕಿನಲ್ಲಿ ಬರುವ ಕ್ಷೇತ್ರ. ಪುಣೆ ಪಟ್ಟಣದಿಂದ ಸುಮಾರು ೧೫೦ ಕಿ. ಮಿ. ದೂರ,

ಪುಣೆಯಿಂದ ನೇರ ಬಸ್ಸುಗಳ ಸೌಕರ್ಯವೂ ಉಂಟು, ಸಹ್ಯಾದ್ರಿ ಘಟ್ಟ ಡಲ್ಲಿರುವ ಅತಿ ಎತ್ತರದ ಪ್ರದೇಶದಲ್ಲಿ ಭೀಮಾಶಂಕರನ ವಾಸ. ಈ ಪರ್ವತ ಭಾಗಕ್ಕೆ 'ಭವಗಿರಿ' ರಥಾಚಲಗಿರಿ, ಮತ್ತು ಭೀಮಾಶಂಕರ ಪರ್ವತವೆಂದೂ ಕರೆಯುವರು. ಇಲ್ಲಿಯ ತಂಪು ಹವೆ ಬಾಧಿಸುವುದಿಲ್ಲ. ಆರೋಗ್ಯಕರ ವೆಂದೆನಿಸುವುದು,

ಸಹ್ಯಾದ್ರಿಯ ವಿವಿಧ ಭಾಗದ ಬೆಟ್ಟಗಳು ಈ ಕ್ಷೇತ್ರವನ್ನು ಆವರಿ-ಸಿರುವವು. ನಾಲ್ಕು ದಿಕ್ಕಿನ ಬೆಟ್ಟದ ಸಾಲುಗಳು ಭೀಮಾಶಂಕರನಿಗೆ ಅಂಗ ರಕ್ಷಕರಾಗಿ ನಿಂತಿವೆ ಏನೋ ಅನ್ನುವಂತಿವೆ, ಹರಿದ್ವರಣ ಗಿಡಗಂಟೆ ಗಳಿಂದಲೂ, ಗಿಡಮೂಲಿಕೆಗಳಿಂದಲೂ, ಮೇಘಾಚ್ಛಾದಿತ ಮೋಡಗಳಿಂದಲೂ ತಂಬಿ ತುಳುಕಾಡಿ ಈ ಕ್ಷೇತ್ರವನ್ನು ರುದ್ರರಮಣೀಯವನ್ನಾಗಿ ಮಾಡಿರುವವು. ಎತ್ತರ ಪರ್ವತವನ್ನು ಏರಲು ಘಾಟಿನಲ್ಲಿಯ ಸುತ್ತು ಬಳಸುವದಾರಿಯು ಒಳ್ಳೇ ಮನಹೋಕವೆನಿಸಿದರೂ ಅಲ್ಪ ಮಟ್ಟಿನ ಭಯವನ್ನು ಹುಟ್ಟಿಸುವುದು. ಎತ್ತರಕ್ಕೇರಿ ಬಂದರೂ ಭೀಮಾಶಂಕರನು ಮಾತ್ರ ಆ ಪರ್ವತದ ತುದಿಯ ಒಳಗಡೆ ಕುಳಿತಿರುವನು. ಕ್ಷೇತ್ರ ಸ್ಥಳವನ್ನು ತಲುಪಿದನಂತರ ಮತ್ತೆ ನೂರಾರು ಪಾವಟಿಗೆಗಳನ್ನು ಇಳಿದರೇನೇ ಆತನ ಸಾನಿಧ್ಯ ಲಭ್ಯ. ಅಲ್ಲಿ ಆತನು ಪರ್ವತ ಪದತಲದ ಚೌಕಟ್ಟಿನಲ್ಲಿ, ಅಲ್ಹಾದಕರ ವಾತಾವರಣ, ತಂಪುಹವೆ, ಜಲಾವೃತ ಕುಂಡ, ಸುತ್ತಲೂ ಚಾಮರವನ್ನು ಬೀಸುವ ಬೃಹದಾಕಾರದ ಗಿಡಮರಗಳ ಮಧ್ಯದಲ್ಲಿ; ರುದ್ರನಾದರೂ ಶಾಂತ ಚಿತ್ತನಾಗಿ ಪಾರ್ವತಿಯೊಂದಿಗೆ ಕುಳಿತಿರುವನು,

ಕಾನನಗಳ ಬೀಡು, ಸುತ್ತಲೆಲ್ಲ ಅರಣ್ಯವೇ ಅರಣ್ಯ. ಹೀಗಾಗಿ ಈ ಮಧ್ಯದಲ್ಲಿ ಹುಲಿಗಳು ವಾಸವಾಗಿರುವವಂತೆ. ವನೌಷಧಗಳ ಭಾಂಡಾರವೇ ಇದೊಂದೆಂದು ಪ್ರತೀತಿ. ಭಗವಾನ್ ಭೀಮಾಶಂಕರನ ದರ್ಶನಕ್ಕಾಗಿ ಪ್ರತಿದಿನ ರಾತ್ರಿ ಹುಲಿಯೊಂದು ಬರುವದೆಂದು ಇಂದಿಗೂ ಹೇಳುವರು. ಪೂರ್ವದಲ್ಲಿ ಈ ಭಾಗದಲ್ಲಿ ಡಾಕಿನಿ-ಶಾಕಿನಿಯರು ವಾಸಿಸುತ್ತಿದ್ದರಂತೆ. ಅದಕ್ಕೆ

ಇದನ್ನು ಡಾಕಿನಿ ಸ್ಥಳವೆನ್ನುವರು. ಆಗ ಇಲ್ಲಿ ಜನವಸತಿ ಅತಿ ವಿರಳವಿದ್ದಿತಂತೆ. ಈಗಲೂ ಅರಣ್ಯದ ಅಂಜಿಕೆಗಾಗಿ ಸಾಕಷ್ಟು ಜನವಸತಿ ಇಲ್ಲ. ಪ್ರತಿದಿನ ಯಾತ್ರಿಕರು ಬಂದು ಹೋಗುವ ಪದ್ಧತಿಯನ್ನು ಇಟ್ಟುಕೊಂಡಿರುವರು. ವಸತಿಗಾಗಿ ಸೌಕರ್ಯದ ಅಭಾವವು ಎದ್ದು ಕಾಣುವುದು. ದೈನಂದಿನ ಉಪಯುಕ್ತ ವಸ್ತುಗಳು ದೊರಕುತ್ತಿದ್ದರೂ ಅವುಗಳ ಬೆಲೆ ಬೆಟ್ಟದಷ್ಟೇ ಎತ್ತರ. ಸಾಮಾನ್ಯ ಜನರಿಗೆ ಎಟುಕುವಂತಿಲ್ಲ. ಆದರೂ ಅನಿವಾರ್ಯ! ಊರಿನಲ್ಲಿ ಕ್ಷೇತ್ರವಿಲ್ಲ, ಕ್ಷೇತ್ರಕ್ಕಾಗಿ ಊರೆಂಬ ಜನವಸತಿ.

## ಪೌರಾಣಿಕ ಹಿನ್ನೆಲೆ :

### ೧) ಭೀಮಾಶಂಕರ :

ಈ ಹಿಂದೆ ಈ ಡಾಕಿನಿಯ ವನದಲ್ಲಿ ರಾಕ್ಷಸರ ರಾಜ್ಯವಿತ್ತು. ಕುಂಭಕರ್ಣನ ಉಪಟಳವು ಹೆಚ್ಚಾಗಲು, ಪ್ರಿಯಧರ್ಮ ( ಸುದಕ್ಷಿಣ ) ನೆಂಬ ರಾಜನು ಆ ದುಷ್ಟ ದೈತ್ಯನನ್ನು ಸಂಹಾರ ಮಾಡಿದನಂತೆ. ತನ್ನ ತಂದೆಯ ವಧೆಯ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಕುಂಭಕರ್ಣನ ಮಗನಾದ ಭೀಮಾಸುರನು ಸುದಕ್ಷಣ ರಾಜನನ್ನು ಶೋಧಿಸತೊಡಗಿದನು. ಕೊನೆಗೆ ಒಮ್ಮೆ ಕಣ್ಣಿಗೆ ಕಂಡನು. ಆ ಸಮಯದಲ್ಲಿ ಪ್ರಿಯಧರ್ಮನು ಸಹ್ಯಾದ್ರಿ ಬೆಟ್ಟದ ತುದಿಯಲ್ಲಿ ಈಶ್ವರ ಲಿಂಗವಂದನ್ನು ಸ್ಥಾಪಿಸಿ ಅದರ ಪೂಜೆಯಲ್ಲಿ ಧ್ಯಾನಾಸಕ್ತನಾಗಿ ಕುಳಿತಾಗ, ಭೀಮ ದೈತ್ಯನು ಆತನ ಕಣ್ಣಿಗೆ ಕಾಣಲಿಲ್ಲ. ಈ ಸಂಧಿಯನ್ನು ಉಪಯೋಗಿಸಿಕೊಂಡು ಪ್ರಿಯಧರ್ಮನನ್ನು ವಧಿಸ-ಬೇಕೆಂದು ತನ್ನ ಖಡ್ಗವನ್ನು ಎತ್ತಲು, ಆಗ ಚಮತ್ಕಾರವೊಂಬಂತೆ, ರಾಜನು ಅರ್ಚಿಸುತ್ತಿದ್ದ ಲಿಂಗದಿಂದ ದಿವ್ಯ ಅಗ್ನಿರೂಪದ ಜ್ವಾಲೆಯೊಂದು ಹೊರ-ಹೊರಟು ಆ ಭೀಮಾಸುರನನ್ನು ಸುಟ್ಟು ಭಸ್ಮ ಮಾಡಿತು. ಇಲ್ಲಿ ಶಂಕರನು ಭೀಮಾಸುರರನ್ನು ಸಂಹರಿಸಿದ ಪ್ರಯುಕ್ತ ಆತನಿಗೆ ಭೀಮಾಶಂಕರನೆಂದು ಹೆಸರು ಬಂದಿತು. ಮತ್ತು ಲಿಂಗದಿಂದ ಜ್ಯೋತಿ ಬಂದ ನಿಮಿತ್ತ ಈ ಲಿಂಗ-ವನ್ನು ಜ್ಯೋತಿರ್ಲಿಂಗವೆಂದೂ ಕರೆಯುವರು.

## ೨) ಭೀಮಕಾಯ ರುದ್ರ :

ಪೂರ್ವಕಾಲದಲ್ಲಿ ತ್ರಿಪುರಾಸುರನೆಂಬ ದೈತ್ಯನಿದ್ದನು. ಸ್ವರ್ಗ, ಮೃತ್ಯು, ಪಾತಾಳ ಈ ಮೂರು ಲೋಕಗಳನ್ನು ನಡುಗಿಸಿದನು. ಎಲ್ಲ ದೇವತೆಗಳೂ ಹತಾಶರಾದರೂ ಮಹಾದೇವನು ಮಾತ್ರ ತ್ರಿಪುರಾಸುರನನ್ನು ನಾಶಮಾಡಲು ಹೊಂಚು ಹಾಕಿದನು. ಭಗವಾನ್ ಶಂಕರನು ಪ್ರಚಂಡ ಶಕ್ತಿಯ ಭೀಮಕಾಯದ ತ್ರಿಪುರಾಸುರನೊಂದಿಗೆ ಯುದ್ಧ ಮಾಡಿ ಅವನನ್ನು ವಧಿಸಿದನು. ಇದರಿಂದ ಲೋಕಗಳೂ ಸಂತೋಷಪಟ್ಟವು. ಆ ಸಮಯದಲ್ಲಿ ಭೀಮಕಾಯದ ರುದ್ರ ರೂಪವನ್ನು ಧರಿಸಿದ ಮಹಾದೇವನು ಭೀಮಾಶಂಕರನಾಗಿ ವಿಶ್ರಾಂತಿಗೆಂದು ಈ ಸಹ್ಯಾದ್ರಿಯ ಉತ್ತುಂಗ ಸ್ಥಳದಲ್ಲಿ ಬಂದು ತಳಊರಿದನು. ಆಗ ಆತನ ಬಾಹುಗಳಿಂದ ಹೊರಟ ಜಲಧಾರೆಗಳಲ್ಲಿ ಒಂದು ಪ್ರವಾಹವಾಗಿ ಅಲ್ಲಿಯೇ ಒಂದು ಕುಂಡದಲ್ಲಿ ಬಿದ್ದಿತು. ಅದು ಅಲ್ಲಿ ಗುಪ್ತಗಾಮಿನಿಯಾಯಿತು. ಅದುವೇ ಭೀಮಾರಥಿ ನದಿಯೆಂದು ಕರೆಯಲ್ಪಟ್ಟಿತು. ಶಂಕರನ ಭೀಮಕಾಯದಿಂದ ಹೊರಟ ಜಲಪ್ರವಾಹದಿಂದ ಉಂಟಾದ ನದಿಯನ್ನು ಭೀಮರಥಿ ಅಥವಾ ಭೀಮಾನದಿಯೆಂದು ಕರೆದಿರುವರು. ಅಲ್ಲಿರುವ ಕುಂಡವೇ ಭೀಮಾನದಿಯ ಉಗಮಸ್ಥಾನವೆಂದು ಹೇಳುವರು. ಆ ನದಿಯ ಉಗಮದ ಕುಂಡವನ್ನು ಭೀಮಾಶಂಕರನ ಪಕ್ಕದಲ್ಲಿ ನೋಡಬಹುದು. ದೈತ್ಯನನ್ನು ಸಂಹಾರಮಾಡಿ ಅವನ ಭಯವನ್ನು ಪರಿಹಾರ ಮಾಡಿದ್ದಕ್ಕಾಗಿ ಭಕ್ತರೆಲ್ಲರೂ ಶಂಕರನು ಅಲ್ಲಿಯೇ ನೆಲಸಬೇಕೆಂದು ಆಗ್ರಹಪಡಿಸಿದ್ದರಿಂದ ಅವರ ಅಪೇಕ್ಷೆಯನ್ನು ಈಡೇರಿಸುವುದಕ್ಕೋಸ್ಕರ ಅಲ್ಲಿಯೇ ಜ್ಯೋತಿರ್ಲಿಂಗವಾಗಿ ಪಾರ್ವತಿ ಸಹಿತ ನಿಂತನು.

## ೩) ಸ್ವಯಂಭು ಮಹಾದೇವ :

ಭವರಗಿರಿ ಅರಣ್ಯದಲ್ಲಿ ಭಾತೀರಾವ ಎಂಬ ಕಟ್ಟಿಗೆ ಕಡಿಯುವವನೊಬ್ಬ ಒಮ್ಮೆ ಅಡವಿಯಲ್ಲಿ ಹೋದಾಗ; ಅಲ್ಲಿದ್ದ ಒಂದು ದೊಡ್ಡ ಮರವನ್ನು



ಶ್ರೀ ಭೀಮಾಶಂಕರ ದೇವಸ್ಥಾನದ
ಪಾರ್ಶ್ವದಲ್ಲಿ ಲೇಖಕರು ತಮ್ಮ ಕುಟುಂಬದವರೊಂದಿಗೆ



ಕಡಿಯಲು ದ್ಯುಕ್ತನಾಗಲು ಅದರ ಬುಡದಲ್ಲಿ ಭೂಮಿಯಿಂದ ರಕ್ತ ಚಿಮ್ಮುವು ದನ್ನು ಕಂಡು ಭಯದಿಂದ ಓಡಿಹೋಗಿ ಜನರನ್ನು ಕರೆದುಕೊಂಡು ಬಂದನು. ಅವರಲ್ಲೊಬ್ಬ ಒಂದು ಆಕಳನ್ನು ತಂದನು. ಆ ಆಕಳನ್ನು ರಕ್ತಧಾರೆಯು ಬರುತ್ತಿದ್ದ ಸ್ಥಳದಲ್ಲಿ ನಿಲ್ಲಿಸಿದನು. ಆ ಆಕಳ ಮೊಲೆಯಿಂದ ಹಾಲು ಅಭಿಷೇಕ ದಂತೆ ಸುರಿಯ ಹತ್ತಿತು. ರಕ್ತಧಾರೆ ನಿಂತಿತು. ಅನಂತರ ಆ ಸ್ಥಳದಿಂದ ದಿವ್ಯಜ್ಯೋತಿರ್ಲಿಂಗವಂದು ಮೇಲೆ ಬಂದಿತು. ಈ ಲಿಂಗದ ಮೇಲೆ ಆ ಜನರೇ ಗುಡಿಯೊಂದನ್ನು ಕಟ್ಟಿಸಿದರಂತೆ. ಇದುವೇ ಭೀಮಾಶಂಕರಲಿಂಗ, ಸ್ವಯಂಭೂ ಮಹಾದೇವ, ಎಂದು ಪ್ರತೀತಿ,

## ಐತಿಹಾಸಿಕ ಹಿನ್ನೆಲೆ :

ಛತ್ರಪತಿ ಶಿವಾಜಿ, ರಾಜಾರಾಮ ಮಹಾರಾಜ ಇವರು ಆಗಾಗ ಬಂದು ಭೀಮಾಶಂಕರನ ದರ್ಶನವನ್ನು ಪಡೆಯುತ್ತಿದ್ದರಂತೆ. ಬಾಳಾಜಿ ವಿಶ್ವನಾಥ ಇವರಿಗೆ ಈ ಸ್ಥಾನವು ಅತ್ಯಂತ ಪ್ರಿಯವಾಗಿತ್ತೆಂದೂ ತಿಳಿದು ಬರುವುದು.

ರಘುನಾಥ ದಾದಾ ಪೇಶ್ವೆ ಇವರು ಈ ಕ್ಷೇತ್ರದಲ್ಲಿ ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದರಂತೆ. ಪುಣೆಯ ಅಂತಾಜಿ ನಾಯಿಕ ಭಿಡೆ ಎಂಬವರು ೧೭೩೭ ರಲ್ಲಿ ಸಭಾಮಂಟಪವಂದನ್ನು ಕಟ್ಟಿಸಿದರಂತೆ. ನಾನಾ ಫಡನೀಸ ಶಿಖರಸಹಿತ ಮಂದಿರದ ಜೀರ್ಣೋದ್ಧಾರವನ್ನು ಮಾಡಿಸಿದರಂತೆ.

ಈ ಮಂದಿರವನ್ನು ಹೇಮಾಡಪಂತಿ ಕಲ್ಲುಗಳಿಂದ ಕಟ್ಟಲ್ಪಟ್ಟಿದ್ದು ಅವುಗಳ ಮೇಲೆ ದಶಾವತಾರದ ಮೂರ್ತಿಗಳನ್ನು ಒಳ್ಳೆ ಸರಳರೇಖೆಯಲ್ಲಿ ಕೊರೆದಿರುವರು.

ಭೀಮಾಶಂಕರನಿಗೆ ನಿತ್ಯ ರುದ್ರಾಭಿಷೇಕ, ಪಂಚಾಮೃತಾಭಿಷೇಕ ಜರುಗುವವು. ಈತನು ಅತ್ಯಂತ ಬೆಲೆಬಾಳುವ ವಸ್ತ್ರಗಳಿಂದ ಆಭೂಷಣನು. ಸೋಮವಾರದಂದು ಬರುವ ಭಕ್ತರ ದಟ್ಟಣೆ ಹೆಚ್ಚು. ಶಿವರಾತ್ರಿಯಂದು ವಿಶೇಷ ಉತ್ಸವ.

ಈ ಕ್ಷೇತ್ರದ ಆಸು-ಪಾಸಿನಲ್ಲಿ ಅನೇಕ ಪ್ರೇಕ್ಷಣೀಯ ಸ್ಥಳಗಳುಂಟು. ಮೋಕ್ಷಕುಂಡ, ಜ್ಞಾನಕುಂಡ, ಗುಪ್ತಭಿಮೇಶ್ವರ, ಸರ್ವತೀರ್ಥ, ಪಾಪನಾಶಿನಿ, ಆಭ್ಯಾತೀರ್ಥ, ಪಾಫ್ರುಪಾದ ತೀರ್ಥಗಳನ್ನು ಹೆಸರಿಸಬಹುದು. ವಿನಾಯಕ, ಗೋರಖನಾಥ ಮಠ, ಹನುಮಾನ್ ತಳಿ ಎಂಬ ಸ್ಥಳಗಳೂ ಇವೆ.

" ಅತಃ ಪರಂ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಭೈಮಶಂಕರಂ ।
ಯಸ್ಯ ಶ್ರವಣ ಮಾತ್ರೇಣ ಸರ್ವಾಭಿಷ್ಟಂ ಲಭೇನ್ನರಃ " ॥

( ಇಲ್ಲಿ ಭೀಮಾಶಂಕರನ ಕೀರ್ತಿಯು ಪ್ರಸಿದ್ಧವಿರುವುದು. ಶ್ರವಣ ಮಾತ್ರದಿಂದಲೇ ಮಾನವರ ಅಭೀಷ್ಟಗಳೆಲ್ಲವೂ ಲಭಿಸುವವು. )

ಪದ್ಯ ರೂಪದಲ್ಲಿ ಶ್ರೀ ಭೀಮಾಶಂಕರನನ್ನು ಹಾಡಿರುವೆ.

## ಶ್ರೀ ಭೀಮಾಶಂಕರ

ಭೀಮಕಾಯದ ರೂಪ ಧರಿಸಿದ
ಭೀಮ ಶಂಕರನಾಗಿ ಬರುತಲಿ
ತ್ರಿಪುರ ದೈತ್ಯನ ವಧಿಸಿ ನಿಂತನು
ವಿಪುಲ ಜ್ಯೋತಿಯ ಬೆಳಗಿ ಲಿಂಗದ ॥೧॥

ದುಷ್ಟ ಶಕ್ತಿಯ ದಮನ ಮಾಡಲು
ಇಷ್ಟ ಭಕ್ತರ ನೆರವಿಗೋಸ್ಕರ
ಭ್ರಷ್ಟ ರಕ್ಕಸನನ್ನು ಕೊಲ್ಲುತ
ಬೆಟ್ಟ ಘಟ್ಟದ ಮೇಲೆ ನಿಂತನು ॥೨॥

ಗಿಡವ ಕಡಿಯಲು ಹೋದ ಮನುಜಗೆ
ಗಿಡದ ಬುಡದಲಿ ರುಧಿರ ಚಿಮ್ಮಲು
ಓಡಿ ಬರುತಲಿ ಜನರ ಕರೆದನು
ನೋಡ ಬನ್ನಿರಿ ನೈಜ ಸ್ಥಿತಿಯನು ॥೩॥

ಭಕ್ತನೋರ್ವನು ತಂದು ಗೋವನು
ಯುಕ್ತಿಯಿಂದಲಿ ರಕ್ತ ಚಿಮ್ಮುವ
ಶಕ್ತಿ ಧಾರೆಯು ಬದಿಗೆ ನಿಲ್ಲಿಸಿ
ರಕ್ತ ನಿಲ್ಲುತ ಹಾಲು ಹರಿಯಿತು ॥೪॥

ಭಕ್ತವೃಂದವು ನೆಲವನಗೆಯಲು
ಯುಕ್ತ ಚೇತನ ಲಿಂಗ ದೊರೆಯಿತು
ಮುಕ್ತ ಕಂಠದಿ ಹಾಡಿ ನಲಿದರು
ಮುಕ್ತಿದಾತನ ಭೀಮ ಶಂಕರ ॥೫॥



# ೭. ಶ್ರೀ ರಾಮೇಶ್ವರ

ರಾಮೇಶ್ವರವು ಭಾರತದ ದಕ್ಷಿಣದ ತುದಿಯಲ್ಲಿದೆ. ತಮಿಳುನಾಡಿನಲ್ಲಿ ಬರುವುದು. ಭಾರತದ ಪವಿತ್ರಕ್ಷೇತ್ರಗಳಾದ ಕೆಲವೇ ಪುಣ್ಯ ಕ್ಷೇತ್ರಗಳಲ್ಲಿ ಇದೂ ಒಂದೆಂದು ಪ್ರತೀತಿ. ಭಾರತೀಯರು ಮೋಕ್ಷಪ್ರಾಪ್ತಿಗಾಗಿ ಕಾಶಿ-ರಾಮೇಶ್ವರ ಯಾತ್ರೆಯನ್ನು ಕೈಕೊಳ್ಳುವರು. ಈಗಲೂ ಈ ಪರಿಪಾಠ ಅನೂಚಾನವಾಗಿ ನಡೆದು ಬಂದಿದೆ. ಮಹೋದಧಿ ಎಂದು ಕರೆಯಲ್ಪಡುವ ಹಿಂದೂ ಮಹಾಸಾಗರಗಳ ಸಂಗಮದ ಸೇತು ಬಂಧದಲ್ಲಿದೆ. ಅದಕ್ಕೆಂದೇ "ಸೇತು ಬಂಧೇತು ರಾಮೇಶಂ" ಅನ್ನುವರು. ಇದೊಂದು ಚಿಕ್ಕ ನಡುಗಡ್ಡೆ. ಮುಖ್ಯ ಭೂ ಪ್ರದೇಶದಿಂದ ಬೇರ್ಪಡಿಸಲ್ಪಟ್ಟ ಸಮುದ್ರದ ಬೆತ್ತಲೆಯು ಒತ್ತು. ಈ ನಡುಗಡ್ಡೆಯ ಉದ್ದ ಸುಮಾರು ೫೫ ಕಿ. ಮಿ. ಸಮುದ್ರವನ್ನು ದಾಟಿ ಈ ದ್ವೀಪವನ್ನು ತಲುಪಬೇಕು. ಸಮುದ್ರದಲ್ಲಿಯೇ ಸೇತುವೆಯನ್ನು ಕಟ್ಟಿರುವರು.

ತಮಿಳು ನಾಡಿನಲ್ಲಿ ದಕ್ಷಿಣ ದಿಕ್ಕಿನಲ್ಲಿ ರಾಮನಾಥಪುರಂ ಎಂಬ ಜಿಲ್ಲೆ. ಈ ಜಿಲ್ಲೆಗೆ ಹೊಂದಿದ ಬಂಗಾಲ ಉಪಸಾಗರ. ಮನ್ನಾರಕೊಲ್ಲಿಗೆ ಹೊಂದಿ ಕೊಂಡು ರಾಮೇಶ್ವರವಿದೆ. ಅಲ್ಲಿಂದ ೮-೧೦ಕಿ.ಮಿ. ದೂರದಲ್ಲಿ ಧನುಷ್ಕೋಡಿ ಎಂಬ ಬಂದರ. ಈಗ ಅದು ಇಲ್ಲ. ಶ್ರೀರಾಮನು ಲಂಕೆಯನ್ನು ತಲುಪಲು ತನ್ನ ಬಾಣದಿಂದ ಇಲ್ಲಿಂದ ಲಂಕೆಗೆ ಸೇತುವೆಯನ್ನು ರಚಿಸಿದನೆಂದು ಹೇಳುವರು. ಧನು ಎಂದರೆ ಬಾಣ, ಕೋಡಿ ಎಂದರೆ ತುದಿ. ಅದರಿಂದಾಗಿ ಈ ಸ್ಥಳಕ್ಕೆ ಧನುಷ್ಕೋಡಿ ಎಂದು ಹೆಸರು, ಈ ಧನುಷ್ಕೋಡಿಯು ೧೯೬೪ ರಲ್ಲಿ ಬೀಸಿದ ಭೀಕರ ಬಿರುಗಾಳಿಯಿಂದ ಹಾರಿಹೋಯಿತಂತೆ. ಈಗ ಅದರ ಗುರುತೂ ಸಿಗದಷ್ಟು ನಾಶವಾಗಿದೆ. ಆದರೂ ಅಲ್ಲಿಯೇ ಬಳಿಯಲ್ಲಿದ್ದ

ರಾಮೇಶ್ವರವು ವಾಯುದೇವನಿಂದ ರಕ್ಷಿಸಲ್ಪಟ್ಟಿತು. ವಾಯುದೂತನಾದ ಹನುಮಂತನು ಶ್ರೀರಾಮಚಂದ್ರನ ಪರಮ ಭಕ್ತನಲ್ಲವೆ ? ಅದಕ್ಕೆ ಆತನೂ ರಕ್ಷಿಸಿದ. ಇಲ್ಲಿ ಕಂಡುಬರುವ ಕಲ್ಲುಬಂಡಿಯ ಸಾಲುಗಳು ಸೇತುವೆ ಕುರುಹೆಂದು ತಿಳಿಯುವರು.

## ಪೌರಾಣಿಕ ಹಿನ್ನೆಲೆ :

ಯುದ್ಧದಲ್ಲಿ ಅನೇಕರನ್ನು ಸಂಹಾರ ಮಾಡಿದ್ದರಿಂದಲೂ, ಮಹಾ ಬ್ರಾಹ್ಮಣನಾದ ರಾವಣನನ್ನು ಹತಗೈದಿದ್ದರಿಂದಲೂ ಶ್ರೀರಾಮನಿಗೆ ಮನಸ್ಸಿನಲ್ಲಿ ಅಸ್ವಸ್ಥತೆಯುಂಟಾಗಿ ಮನಸ್ಸು ಹೊಯ್ದಾಡಹತ್ತಿತ್ತು. ಇದನ್ನು ಅರಿತ ಅಗಸ್ತ್ಯ ಮುನಿಗಳು; ಭಗವಾನ್ ಶಂಕರನ ದಿವ್ಯ ಲಿಂಗವಂದನ್ನು ಈ ಸ್ಥಳದಲ್ಲಿ ಸ್ಥಾಪಿಸಿ ಪೂಜಿಸಿದರೆ ಮನಸ್ಸಿನ ಅಲ್ಲೋಲಕಲ್ಲೋಲ ದೂರವಾಗಿ ಶಾಂತಿ ಲಭಿಸುವುದೆಂದು ತಿಳಿಸಲು, ಅದರಂತೆ ಶ್ರೀರಾಮನು ಇಲ್ಲಿ ಲಿಂಗವನ್ನು ಸ್ಥಾಪಿಸಿದನು, ಶ್ರೀರಾಮನು ಈ ಈಶ್ವರ ಲಿಂಗವನ್ನು ಸ್ಥಾಪಿಸಿದ್ದರಿಂದ ಇದನ್ನು ರಾಮೇಶ್ವರನೆಂದು ಕರೆದರು.

೧) ಶ್ರೀರಾಮನು ಯುದ್ಧ ಮುಗಿಸಿ ಲಂಕೆಯಿಂದ ಸೀತಾಸಮೇತನಾಗಿ ಬರುವಾಗ ಈ ಸ್ಥಳದಲ್ಲಿ ಶಿವಲಿಂಗವನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿದನು. ಸಂಕಲ್ಪಿಸಿದ ಶುಭಮುಹೂರ್ತದೊಳಗಾಗಿ ಲಿಂಗವನ್ನು ತರಲು ಹನುಮಂತನನ್ನು ಕೈಲಾಸಕ್ಕೆ ಕಳಿಸಿದನು. ಹನುಮಂತನು ಆ ಶುಭ ಮುಹೂರ್ತದೊಳಗಾಗಿ ತಿರುಗಿ ಬಾರದ ನಿಮಿತ್ತ, ಸೀತಾದೇವಿಯು ಅಲ್ಲಿದ್ದ ಉಸುಕಿನಿಂದ ಲಿಂಗವಂದನ್ನು ಮಾಡಿ ಸುಮುಹೂರ್ತದಲ್ಲಿ ಪ್ರತಿಷ್ಠಾಪಿಸಿ ಪೂಜೆಯನ್ನು ಸಾಂಗಗೊಳಿಸಿದರು. ಅಷ್ಟರಲ್ಲಿ, ಅಷ್ಟೊಂದು ದೂರದಲ್ಲಿ ಕೈಲಾಸದಿಂದ ಲಿಂಗವನ್ನು ತಂದ ಹನುಮಂತನಿಗೆ ಅಲ್ಲಿಯ ಸನ್ನಿವೇಶವನ್ನು ಕಂಡು ಸಿಟ್ಟು ಬಂದು, ಆ ಮಳಲ ಲಿಂಗವನ್ನು ಕಿತ್ತು ತಾನು ತಂದ ಲಿಂಗವನ್ನು ನೆಡಬೇಕೆಂದು ಅಪೇಕ್ಷಿಸಿ ತನ್ನೆಲ್ಲ ಬಲವನ್ನು ಉಪಯೋಗಿಸಿ ಆ ಮಳಲು ಲಿಂಗವನ್ನು ಕಿತ್ತಲು ಪ್ರಯತ್ನಿಸಿದರೂ ಅದು ಕಿತ್ತು ಬರಲೇ ಇಲ್ಲ. ನಂತರ

ರಾಮನು ಹನುಮಂತನನ್ನು ಸಾಂತ್ವನಗೊಳಿಸಿ, ಆ ಮರಳು ಲಿಂಗದ ಬಳಿಯಲ್ಲಿಯೇ ಹನುಮಂತನು ತಂದ ವಿಶ್ವಲಿಂಗವನ್ನು ಪ್ರತಿಷ್ಠಾಪಿಸಿದನು. ಅಲ್ಲದೆ ಎಲ್ಲ ಪೂಜೆ-ಪುನಸ್ಕಾರಗಳು ಯಥಾವತ್ತಾಗಿ ಮೊದಲು ವಿಶ್ವಲಿಂಗಕ್ಕೆ ಸಂದಾನಂತರ ಮಳಲು ಲಿಂಗಕ್ಕೆ ಸಲ್ಲತಕ್ಕದ್ದೆಂದು ಶ್ರೀರಾಮನು ಆದೇಶವಿತ್ತನು. ಶ್ರೀ ರಾಮೇಶ್ವರ ಲಿಂಗವು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದೆಂದು ಪ್ರಸಿದ್ಧಿಯನ್ನು ಪಡೆದಿದೆ.

೨) ಮತ್ತೊಂದು ಆಖ್ಯಾಯಿಕೆಯ ಪ್ರಕಾರ : ಶ್ರೀರಾಮನು ವನವಾಸ ಕಾಲದಲ್ಲಿ ಸೀತಾದೇವಿಯನ್ನು ಹುಡುಕುತ್ತ ಬಂದು ಹಿಂದೂ ಮಹಾಸಾಗರದ ತಡಿಗೆ ತಲುಪಿದನು. ಅಲ್ಲಿಂದ ಸಮುದ್ರವನ್ನು ದಾಟಿ ಲಂಕೆಯನ್ನು ತಲುಪಬೇಕೆಂಬ ಹವಣಿಕೆಯಲ್ಲಿರಲು; ಆತನಿಗೆ ಬಾಯಾರಿಕೆಯಾಯಿತಂತೆ. ಬಾಯಾರಿಕೆಯನ್ನು ಸಂಹರಿಸಿಕೊಳ್ಳಲು ಶಿವನನ್ನು ಪೂಜಿಸುವ ಇಚ್ಛೆಯಾಯಿತಂತೆ, ಆದ್ದರಿಂದ ಸಮುದ್ರದಡದಲ್ಲಿಯ ಮಳಲಿನ ಲಿಂಗವನ್ನು ಮಾಡಿ ಪೂಜಿಸುತ್ತಿರಲು; ಶಿವನು ಪ್ರತ್ಯಕ್ಷನಾಗಲು ರಾಮನ ಬಾಯಾರಿಕೆಯೂ ನೀಗಿತಲ್ಲದೆ ಆ ಮಹಾಸಾಗರವನ್ನು ದಾಟಿ, ರಾವಣನನ್ನು ಸಂಹರಿಸಿ ಸೀತೆಯನ್ನು ಕರೆದುಕೊಂಡು ಬರುವ ಅನುಗ್ರಹವೂ ಆಯಿತಂತೆ. ಆದಕ್ಕೆ ಇಲ್ಲಿಯ ಲಿಂಗಕ್ಕೆ ರಾಮ ಮತ್ತು ಈಶ್ವರ ಈರ್ವರೂ ಕಾರಣರಾದ ನಿಮಿತ್ತ ರಾಮೇಶ್ವರ ಲಿಂಗವೆಂದು ಹೆಸರು ಬಂದಿತು.

ಈ ಲಿಂಗದ ಒಕ್ಕಣಿಕೆಯು ಗೆಲವಿನ ಅನುಗ್ರಹ ( Blessings of Victory ) ಎನ್ನುವುದನ್ನು ಸೂಚಿಸುತ್ತದೆ.

"ಇತಿದಶ್ಚ ಸಮಾಖ್ಯಾತಂ ಜ್ಯೋತಿರ್ಲಿಂಗಂ ಶಿವಸ್ಯತು ।
ರಾಮೇಶ್ವರಾಭಿದ್ಯಂ ದಿವ್ಯಂ ಶ್ರೃಣ್ವತ್ವಾಂ ಪಾಪಹಾರಕಂ " ॥

( ರಾಮೇಶ್ವರನೆಂದು ಕರೆಯಲ್ಪಡುವ, ದೈವೀಸಂಭೂತನಾದ ಈ ಶಿವಜ್ಯೋತಿರ್ಲಿಂಗದ ಮಹಿಮೆಯ ಶ್ರವಣ ಮಾತ್ರದಿಂದಲೇ ಪಾಪಗಳು ಪರಿಹಾರವಾಗುವವು.

ಇಲ್ಲಿಯೂ ಪ್ರಧಾನ ದೇವರು ಈಶ್ವರಲಿಂಗ. ರಾಮನಾಥ ಮಂದಿರವು, ಶಿಲ್ಪವಿದ್ಯೆ, ವಾಸ್ತು ಶಿಲ್ಪಕಲೆಯ ಮಹೋನ್ನತಿಯ ತುತ್ತತುದಿ. ಮಂದಿರದ ನಡುವಳ ಕವಟಾನುಗಳು ವಿಶ್ವದಲ್ಲಿಯೇ ಅತ್ಯಂತ ಭವ್ಯ ದಿವ್ಯವೆಂದು ಪರಿಗಣಿಸಲ್ಪಟ್ಟಿವೆ. ಒಟ್ಟಿನಲ್ಲಿ ಈ ಮಂದಿರದಲ್ಲಿ ರಚನಾ ಕೌಶಲ್ಯದ ನಕ್ಷೆಗಳ ಸುಸಜ್ಜಿತ ಬೆಸುಗೆ.

ಮಂದಿರದ ಹೊರಸುತ್ತ ನಾಲ್ಕು ದಿಕ್ಕುಗಳಲ್ಲಿ ಎತ್ತರವಾದ ಗೋಡೆಗಳುಂಟು. ಪೂರ್ವ-ಪಶ್ಚಿಮವಾಗಿ ೮೬೫ ಫೂಟು ಎತ್ತರ. ಉತ್ತರ-ದಕ್ಷಿಣವಾಗಿ ೬೫೭ ಫೂಟು ಎತ್ತರದ ಗೋಡೆಗಳು. ಪೂರ್ವ ಮತ್ತು ಪಶ್ಚಿಮಕ್ಕೆ ಬೃಹದಾಕಾರದ ಗೋಪುರಗಳು. ಉತ್ತರ-ದಕ್ಷಿಣ ದಿಕ್ಕುಗಳಲ್ಲಿ ಸುಸಜ್ಜಿತವಾದ ಮಹಾದ್ವಾರಗಳು. ಮಂದಿರದ ಒಳಬದಿಯಲ್ಲಿ ಐದು ಅಡಿ ಎತ್ತರವಿರುವ ಶಿಲಾಸ್ತಂಭಗಳ ಮೇಲೆ ಬೃಹದಾಕಾರದ ಕಂಬಗಳ ಮಧ್ಯದಿಂದ ನುಸುಳಿ ಹರಿದು ಹೋಗುವ ದೈತ್ಯಾಕಾರದ ಉದ್ದವಾದ ಕಾರಿಡಾರಗಳು ಸರ್ವರ ದೃಷ್ಟಿಯನ್ನು ಸೆಳೆಯುವವು. ಹೊರಬದಿಯ ಕಾರಿಡಾರವು ಜಗತ್ತಿನಲ್ಲಿಯೇ ಅತ್ಯಂತ ಉದ್ದವೆಂದು ತಿಳಿಯುವುದು. ಇದು ೪೦೦ ಅಡಿ ಪೂರ್ವ ಪಶ್ಚಿಮ, ೬೪೦ ಅಡಿ ದಕ್ಷಿಣೋತ್ತರ ಉದ್ದವಿದ್ದು, ಅದರೊಳಗಿನ ಕಾರಿಡಾರಗಳು ಪ್ರತಿಯೊಂದೂ ಸುಮಾರು ೨೨೪ ಅಡಿ ಪೂರ್ವ ಪಶ್ಚಿಮವಾಗಿಯೂ, ೩೫೨ ಅಡಿ ದಕ್ಷಿಣೋತ್ತರವಾಗಿಯೂ ಉದ್ದವಿರುವವು. ಇವುಗಳ ಅಗಲಳತೆ ೧೪ರಿಂದ ೧೭ ಫೂಟುಗಳಲ್ಲಿ ಹೆಚ್ಚು ಕಡಿಮೆಯಾಗುತ್ತ ಹೋಗುವುದು. ದೇವಸ್ಥಾನದ ಮುಖ್ಯ ಮಂದಿರದಲ್ಲಿಯೂ ಒಂದು ಕಾರಿಡಾರವಿದ್ದು ಪೂರ್ವಪಶ್ಚಿಮವಾಗಿ ೧೧೭ ಫೂಟ ಉದ್ದ, ದಕ್ಷಿಣೋತ್ತರವಾಗಿ ೧೭೨ ಫೂಟು ಉದ್ದ. ೧೪ರಿಂದ೧೭ ಫೂಟು ಅಗಲ. ಈ ಎಲ್ಲ ಕಾರಿಡಾರಗಳ ಉದ್ದಳತೆಯು ಸುಮಾರು ನಾಲ್ಕು ಸಾವಿರ ಅಡಿಗಳಷ್ಟು ಎಂದು ತಿಳಿದು ಬರುತ್ತದೆ. ಹೊರಬದಿಯ ಕಾರಿಡಾರದಲ್ಲಿ ೧೨೦೦ ಕಂಬಗಳಿದ್ದು ಅವುಗಳ ಎತ್ತರ ನೆಲದಿಂದ ವೃತ್ತದವರೆಗೆ ಸುಮಾರು ೩೦ ಅಡಿಗಳಷ್ಟು ಕಂಬಗಳ ರಚನಾ ಸಾವಿನ್ಯ ಮನಸ್ಸಿಗೆ ಅಚ್ಚೊತ್ತಿದಂತಿರುವುದು. ಒಟ್ಟಿನಲ್ಲಿ ದ್ರಾವಿಡ ಕಲೆಯ ಶ್ರೇಷ್ಠತಮ ಸೌಂದರ್ಯದ ಸಂಕೇತದ ಹೊನಲೆಲ್ಲ ಇಲ್ಲಿ ಎರಕ ಹೊಯ್ದಂತಿರುವುದು.

ಈಶ್ವರನ ಮುಂದೆ ಬಸವಣ್ಣ ಇವರೇ ಬೇಕಲ್ಲವೆ ? ಇಲ್ಲಿಯೂ ನಂದಿ ಇದ್ದು; ಸುಣ್ಣ–ಗಚ್ಚು-ಗಾರೆಗಳಿಂದ ನಿರ್ಮಿತವಾದದ್ದು. ೨೫ ಅಡಿ ಉದ್ದ, ೧೭ ಅಡಿ ಎತ್ತರ ೧೨ ಅಡಿ ಅಗಲವಿದೆ. ಇದೊಂದು ಬೃಹದಾಕಾರದ ಮಂದಿರಕ್ಕೆ ಬೃಹದಾಕಾರ ನಂದಿ.

ಸುವರ್ಣ ಕವಚದಿಂದ ಆವೃತವಾದ ಪೀಠದ ಮೇಲೆ ಶುಭ್ರ ಶಿಲೆಯ ರಾಮೇಶ್ವರ ಲಿಂಗವು ಇದೆ. ಲಿಂಗದ ಮೇಲ್ಭದಿಯಲ್ಲಿ ದೊಡ್ಡ ಹೆಡೆಯ ಸರ್ಪವಿದೆ. ಲಿಂಗದ ಮೇಲೆ ಸತತವೂ ಬಿಲ್ವಪತ್ರಿ, ಮತ್ತು ಜಲಧಾರೆ ಬೀಳುತ್ತಿರುತ್ತವೆ. ಕರ್ಪೂರದಾರತಿಯ ಸಮಯದಲ್ಲಿಯ ದರ್ಶನ ದಿವ್ಯ ದರ್ಶನ. ಪ್ರತಿದಿನ ಬೆಳಗಿನ ೪ ಗಂಟೆಯಿಂದ ರಾತ್ರಿ ೧೦ ಗಂಟೆಯ ವರೆಗೂ ಪೂಜೆ, ದರ್ಶನ ನಡೆಯುತ್ತಲೇ ಇರುತ್ತವೆ.

## ಸ್ಫಟಿಕ ಲಿಂಗ :

ಎಲ್ಲಕ್ಕಿಂತಲೂ ಮಿಗಿಲಾಗಿ ಇಲ್ಲಿಯ ಸ್ಫಟಿಕ ಲಿಂಗದ ದರ್ಶನ ಅತಿ ಮುಖ್ಯ. ಇದನ್ನು ವಿಭೀಷಣನು ಪ್ರತಿಷ್ಠಾಪಿಸಿದನೆಂದು ಪ್ರತೀತಿ. ಇದು ವಿಶಾಲಾಕ್ಷಿಯ ಪಕ್ಕದಲ್ಲಿರುವುದು. ಈ ಲಿಂಗವನ್ನು ನೋಡಬೇಕೆಂದರೆ ಬೆಳಗಿನ ನಾಲ್ಕು ಗಂಟೆಗೇ ಹೋಗಬೇಕು. ಗರ್ಭಗುಡಿಯಲ್ಲಿ ಅಂದರೆ ಮೂಲಸ್ಥಾನದಲ್ಲಿ ಈ ಲಿಂಗಕ್ಕೆ ಕ್ಷೀರಾಭಿಷೇಕ. ಆಗ ಸ್ಫಟಿಕ ಲಿಂಗವನ್ನು ಕಣ್ತುಂಬ ನೋಡಿ ಭಕ್ತನು ಆನಂದ ಪರವಶನಾಗುವನು. ಇದೊಂದು ಪಾರದರ್ಶಕ ಲಿಂಗ. ಭಾವುಕನಾದವನಿಗೆ ಮೈ ಮರೆಯುವ ವಾತಾವರಣ ವನ್ನು ನಿರ್ಮಿಸುತ್ತದೆ.

"ಸಮಸ್ತ ಪಾಪಕ್ಷಯ ದಿವ್ಯನಾಮಂ ಪ್ರಸನ್ನ ಸಂಸಾರಗದೌಷಧಂ ತ್ವಾಂ ।
ಸಮಜ್ಞನಾಭೀಷ್ಟ ವರಪ್ರದಂಚ ಶ್ರೀರಾಮನಾಥ ಶಿರಸಾನಮಾಮಿ ॥
ಶ್ರೀಸೇತು ವಾಸು ಜನತಾಮಭೀಷ್ಟಂ ಶ್ರೀಗಂಧಮಾದಿತ್ಯ ಗಿರಿಪ್ರಸನ್ನಂ ।
ಮನೋರಮಾಭೀಷ್ಟ ವರ ಪ್ರದಂಚ ಶ್ರೀರಾಮನಾಥಂ ಶಿರಸಾನಮಾಮಿ " ॥

ಎಂದು ಹೇಳುತ್ತ ಭಕ್ತರು ಸ್ವಾಮಿ ಶ್ರೀರಾಮನಾಥನನ್ನು ಪ್ರಾರ್ಥಿಸುತ್ತಾರೆ. ಈ ಸ್ಫಟಿಕ ಲಿಂಗದ ದರ್ಶನವನ್ನೇ ವಿಶ್ವರೂಪ ದರ್ಶನವೆಂದು ಹೇಳುತ್ತಾರೆ. ಈ ದರ್ಶನಕ್ಕೆ ಬಹು ಪ್ರಾಮುಖ್ಯತೆಯುಂಟು ಅತ್ಯಂತ ಪುಣ್ಯಕರವೆಂದೂ ತಿಳಿಯುವರು.

## ಐತಿಹಾಸಿಕ ಹಿನ್ನೆಲೆ :

ಪೂರ್ವಕಾಲದಲ್ಲಿ ಇದೊಂದು ಚಿಕ್ಕ ಗುಡಿ. ಇಂದಿನ ಈ ಭವ್ಯ ಸ್ಥಿತಿಗೆ ಬರಲು ರಾಜಮಹಾರಾಜರೂ, ಭಕ್ತರೂ, ಕಾರಣೀಭೂತರು ಇದಕ್ಕೆ ನೂರಾರು ವರುಷಗಳ ಇತಿಹಾಸವುಂಟು. ರಾಮನಾಡಿನ 'ಸೇತುಪತಿಗೆ' ಹೆಚ್ಚು ಶ್ರೇಯಸ್ಸು ಸಲ್ಲುವುದು. ಸಿಲೋನದ ಅರಸನಾಗಿದ್ದ ಪರಾಕ್ರಮ ಬಾಹು ಹನ್ನೆರಡನೆಯ ಶತಮಾನದಲ್ಲಿ ಮೂಲ ಲಿಂಗದ ಸುತ್ತಮುತ್ತ ಮಂದಿದವನ್ನು ಕಟ್ಟಿಸಿದನಂತೆ. ಗುಡಿಯ ಮೇಲೆ ೨೫ ಅಡಿ ಎತ್ತರದ ಕಲ್ಲುಗೋಪುರವನ್ನು ರಾಮನಾಡಿನ ಉದಯಸೇತುಪತಿ ಹಾಗೂ ನಾಗೂರು ವೈಶ್ಯರು ಕಟ್ಟಿಸಿದರು. ೧೨ನೇ ಶತಮಾನದಲ್ಲಿ ದಳವಿ ಸೇತುಪತಿ ಎಂಬುವನು ಮುಖ್ಯದ್ವಾರದ ಮುಖ್ಯ ಗೋಪುರವನ್ನು ಕಟ್ಟಿಸಿದನು. ೧೮ನೇ ಶತಮಾನದ ಆರಂಭದಲ್ಲಿ ರವಿವಿಜಯ ರಘುಪತಿಯು ಅಂಬಾಲ ಮಂದಿರದ ಎದುರಿನಲ್ಲಿ ಮಂಟಪವನ್ನು ಕಟ್ಟಿಸಿದನು. ೧೯ನೇ ಶತಮಾನದ ಕೊನೆಯಲ್ಲಿ ಮುತ್ತು ರಾಮಲಿಂಗಂ ಸೇತುಪತಿ ಹೊರಬದಿಯ ಕಾರಿಡಾರವನ್ನು ಪೂರ್ಣಗೊಳಿಸಿದರಂತೆ. ೧೮೮೯ ೯೦೪ರ ಅವಧಿಯಲ್ಲಿ ಎಲ್.ಎ. ಆರ್ ಎಂಬ ದೇವಕೊಟ್ಟೆಯ ಕುಟುಂಬದವರು ತಿರುಪ್ಪಣಿ ಫಂಡಿನಿಂದ ೧೨೬ ಅಡಿ ಎತ್ತರವಿರುವ ಪೂರ್ವ ಬದಿಯ ಭವ್ಯ ಗೋಪುರವನ್ನು ಪೂರ್ಣಗೊಳಿಸಿದರೆಂದು ತಿಳಿದು ಬರುವುದು.

# ವಾರ್ಷಿಕ ಉತ್ಸವಗಳು

೧. **ಅರುದು ದರ್ಶನಂ :** ಡಿಸೆಂಬರ–ಜನವರಿ ತಿಂಗಳಳಲ್ಲಿ ಹತ್ತು ದಿನದ ಪರಿಯಂತ.

೨. **ಋಷಭವಾಹನ :** ಮಹಾಶಿವರಾತ್ರಿ ಅಭಿಷೇಕ• ಮಹಾ ಶಿವರಾತ್ರಿಯಲ್ಲಿ (ಫೆಬ್ರುವರಿ ತಿಂಗಳಲ್ಲಿ) ೧೦ ದಿನ ಪರಿಯಂತ.

೩. **ಸ್ಫಟಿಕ ಲಿಂಗ ಪೂಜೆ :** ನಿತ್ಯ ೫-೬೦ಕ್ಕೆ ಬೆಳಗಿನಲ್ಲಿ.

ಶ್ರೀ ರಾಮೇಶ್ವರನಿಗೆ ಶಿವರಾತ್ರಿಯಂದು ಬ್ರಹ್ಮೋತ್ಸವವು ನಡೆಯುತ್ತದೆ. ಅಂದು ವಜ್ರ, ವೈಡೂರ್ಯ, ಸುವರ್ಣ ಆಭರಣಗಳಿಂದ ಉತ್ಸವ ಮೂರ್ತಿಯನ್ನು ಅಲಂಕರಿಸಿ ಬೆಳ್ಳಿಯ ತೇರಿನಲ್ಲಿ ಊರಿನ ನಾಲ್ಕು ದಿಕ್ಕಿನಲ್ಲಿ ಭರ್ಜರಿಯ ವಾದ್ಯಗಳೊಂದಿಗೆ ವೈಭವದ ಮೆರವಣಿಗೆಯನ್ನು ಮಾಡುವರು. ಇದೊಂದು ಅಪೂರ್ವ ನೋಡತಕ್ಕದ್ದು. ಈ ಮೆರವಣಿಗೆಯನ್ನು ನೋಡಲೆಂದೇ, ಉತ್ತರಭಾರತ, ಕಾಶ್ಮೀರ, ನೇಪಾಳ ಮೊದಲಾದ ಕಡೆಗಳಿಂದಲೂ ಭಕ್ತರು ಬರುವರು. ರಾಮೇಶ್ವರನ ಖ್ಯಾತಿ ಭಾರತದ ಗಡಿಯನ್ನು ದಾಟಿ ತಿಬೇಟ, ನೇಪಾಳದವರೆಗೂ ಹರಡಿದೆ. ತಿಬೇಟ, ನೇಪಾಳಕ್ಕೆ ಹೋದಾಗ; ಭಾರತದ ಬಗ್ಗೆ ನಿಮಗೇನು ಗೊತ್ತು? ಎಂದು ಕೇಳಿದರೆ, ಅಲ್ಲಿಯ ಜನರು "ಶ್ರೀ ಶಂಕರಾಚಾರ್ಯರು, ಶೃಂಗೇರಿ, ರಾಮೇಶ್ವರ, ಕನ್ಯಾಕುಮಾರಿ" ಎಂದು ಹೇಳುವರು.

ರಾಮೇಶ್ವರ ಮಂದಿರವಲ್ಲದೆ; ಕೋದಂಡರಾಮ, ಗಂಧಮಾಧವ, ಶಾಂತಮಾಧವ, ಪಾರ್ವತಮ್ಮ ಮೊದಲಾದ ಗುಡಿಗಳಿರುವವು.

ಮಂದಿರದ ಒಳಗಡೆ; ಸಾವಿತ್ರಿ, ಗಾಯಿತ್ರಿ, ಸರಸ್ವತಿ, ಇತ್ಯಾದಿ ೨೪ ತೀರ್ಥಗಳೂ ಉಂಟು. ಹೊರಗಡೆಯೂ ಸುಮಾರು ೨೨ ತೀರ್ಥಗಳೂ ಉಂಟು. ಇವು ಸಮುದ್ರಕ್ಕೆ ಅತ್ಯಂತ ಸಮೀಪವಿದ್ದರೂ ಈ ತೀರ್ಥಗಳ ನೀರು ಸಿಹಿಯಾಗಿಯೇ ಇರುವುದೊಂದು ವೈಶಿಷ್ಟ್ಯ! ವೈಚಿತ್ರ್ಯ!

ಜಟಾಯು ತೀರ್ಥವೆಂಬುದು ರಾಮೇಶ್ವರ–ಧನುಷ್ಕೋಡಿಗಳ ಮಧ್ಯ ದಲ್ಲಿದ್ದು ರಾಮೇಶ್ವರದಿಂದ ೪ ಕಿ· ಮಿ. ದೂರ. ಶ್ರೀರಾಮನು ರಾವಣನನ್ನು ಸಂಹಾರ ಮಾಡಿ ಮರಳಿ ಅಯೋಧ್ಯೆಗೆ ಹೋಗುವಾಗ ಈ ತೀರ್ಥದಲ್ಲಿ ತನ್ನ ಕೂದಲುಗಳನ್ನು ತೊಳೆದುಕೊಂಡನೆಂದು ಹೇಳುವರು. ಇಲ್ಲಿ ಸ್ನಾನ ಮಾಡಿದರೆ ಪಾಪ ಪರಿಹಾರವಾಗುವುದೆಂದು ನಂಬಿಕೆ. ಸಮುದ್ರಗಳು ಸಂಗಮಿಸುವಲ್ಲಿ ಸಮುದ್ರ ಸ್ನಾನವೂ ಪುಣ್ಯಕರ.

ರಾಮೇಶ್ವರದಿಂದ ಸುಮಾರು ಎರಡು ಕಿಲೋಮೀಟರ ದೂರದಲ್ಲಿ ಗಂಗಮಾಧವ ಪರ್ವತವಂದಿದೆ. ಈ ಬೆಟ್ಟದ ಮೇಲೆ ನಿಂತುಕೊಂಡೇ ಹನುಮಂತನು ಲಂಕೆಗೆ ಹಾರಿದನೆಂದು ಹೇಳುತ್ತಾರೆ. ಬೆಟ್ಟದ ಮೇಲೆ ಶ್ರೀರಾಮನ ಪಾದುಕೆಗಳನ್ನು ನೋಡಬಹುದು. ಬೆಟ್ಟದ ಮೇಲೆ ನಿಂತು· ನೋಡಿದರೆ ಸುತ್ತಲೂ ಹರಡಿದ ಸಮುದ್ರಗಳು, ರಾಮೇಶ್ವರ ಪಟ್ಟಣ, ರಾಮೇಶ್ವರ ಮಂದಿರ. ಇವುಗಳ ರಮ್ಯ-ದಿವ್ಯ-ಭವ್ಯ ನೋಟ ಮನದಾನಂದ ವನ್ನು ಕೊಡುವುದು.

ರಾಮೇಶ್ವರ ಮಂದಿರದ ಪಾರುಪತ್ಯಗಳನ್ನೆಲ್ಲ ಈಗ ಸರಕಾರವೇ ವಹಿಸಿ ಕೊಂಡಿದೆ. ಅತ್ಯಂತ ಸಮರ್ಪಕ ವ್ಯವಸ್ಥೆಯಿಂದ ಮಂದಿರದ ಸಕಲ ಕಾರ್ಯಗಳು ಸುಸೂತ್ರವಾಗಿ ಜರುಗುವವು. ಈ ಕ್ಷೇತ್ರದಲ್ಲಿ ಭಿಕ್ಷಾಟನೆ ಕಂಡು ಬರುವುದಿಲ್ಲ. ಇಲ್ಲಿಯಾರೂ ದಾನವನ್ನು ಸ್ವೀಕರಿಸುವುದಿಲ್ಲ.
"ಸರಿತಾಭ್ರುಪರ್ಣೀ ಜಲರಾಶಿಯೋಗೆ ನಿಬಧ್ಯಸೇತುಂ ವಿಶಿ ಖೈರಸಂಖ್ಯೈಃ
ಶ್ರೀರಾಮಚಂದ್ರೇಣ ಸಮರ್ಪಿತಂ ತಂ ರಾಮೇಶ್ವರಾಖ್ಯಂ ನಿಯತಂ
ನಮಾಮಿ" !!

## ವಸತಿ ಸೌಕರ್ಯ :

ಇಲ್ಲಿ ಸಮೀಪದ ಊರೆಂದರೆ ರಾಮನಾಥ ಪುರಂ ಎಂಬ ಜಿಲ್ಲಾ ಕೇಂದ್ರ. ರಾಮೇಶ್ವರವು ಯಾತ್ರಿಕರಿಗಾಗಿಯೇ ನಿರ್ಮಾಣಗೊಂಡ ಊರು. ಇಂದು ಇಲ್ಲಿ ಎಲ್ಲ ಅನುಕೂಲತೆಗಳೂ ಉಂಟು. ಭಟ್ಟರ ಮನೆಗಳಲ್ಲಿ

ಬೀಡಾರಕ್ಕಾಗಿ ಅನುವು ದೊರಕುವುದು. ಊಟೋಪಚಾರದ ವ್ಯವಸ್ಥೆಯನ್ನೂ ಮಾಡುವರು. ಸ್ವತಂತ್ರ ವಾಸಕ್ಕೂ ಬಾಡಿಗೆಯಿಂದ ಕೋಣೆಗಳೂ ದೊರಕುವವು. ಆದರೆ; ಎಲ್ಲೆಡೆಯಲ್ಲಿ ಸ್ವಚ್ಛತೆಯ ಅಭಾವ ಮಾತ್ರ ಕಂಡು ಬರುವುದು. ಒಂದೆರಡು ದಿನಗಳ ಊಟ-ವಸತಿಗೆ ತೊಂದರೆಯಾಗದು.

ಶ್ರೀ ರಾಮೇಶ್ವರನನ್ನು ಕನ್ನಡದಪದ್ಯದಲ್ಲಿ ಮೂಡಿಸಿರುವೆ

## ೭. ಶ್ರೀರಾಮೇಶ್ವರ :

ರಾಮಚಂದ್ರನು ಪೂಜೆಗೋಸುಗ
ಕಾಮಿತಾರ್ಥದ ಲಿಂಗ ತಂದನು
ರೋಮ ಪುಲುಕಿತ ಹೊಳೆವ ಕಳೆಯನು
ರಾಂಮನಾಮವ ಜಪಿಸಿ ಹನುಮನು ॥೧॥

ಮೂರು ಸಾಗರ ಕೂಡುವಲ್ಲಿಯೆ
ಹರಡಿ ನಿಂತಿಹ ಸೇತು ಬಂಧದಿ
ಮೆರೆವ ಲಿಂಗವ ಸ್ಥಪಿಸಿ ಬಿಟ್ಟರು
ಧರಣಿ ಮಂಡಲ ಮಧ್ಯದಲ್ಲಿಯೆ ॥೨॥

ಶ್ರವಣ ಮಾತ್ರದಿ ಪಾಪನಾಶವು
ಶಿವನ ಲಿಂಗದ ಮಹಿಮೆ ಕೇಳಲು
ಭವದಿ ಬಂದಿಹ ಜ್ಯೋತಿ ಲಿಂಗಕೆ
ಜೀವಮಿತ್ತರು ಸೀತೆರಾಮರು ॥೩॥

ಕಣ್ಣು ಕುಕ್ಕುವ ಸ್ಫಟಿಕ ಲಿಂಗವು
ಭಿನ್ನ ಭಾವದ ಭಕ್ತವೃಂದದ
ಕಣ್ಣು ತೆರೆಯಿಸಿ ಹೃದಯವರಳಿಸಿ
ಜ್ಞಾನವಿತ್ತಿತು ಮುಕ್ತಿ ಮಾರ್ಗಕೆ ॥೪॥

— ● —



ಶ್ರೀ ನಾಗೇಶ್ವರ

# ೮. ಶ್ರೀನಾಗೇಶ್ವರ

ಭಕ್ತನ ಸಹಾಯಕ್ಕಾಗಿ ( To a devots's aid ) ಎಂಬುದು ಈ ಲಿಂಗದ ಒಕ್ಕಣಿಕೆ.

## ಪೌರಾಣಿಕ ಹಿನ್ನೆಲೆ :

೧. ಸುಪ್ರಿಯನೆಂಬ ವೈಶ್ಯನು ಶಿವನ ಪರಮಭಕ್ತ. ಒಮ್ಮೆ ಯಾತ್ರಾರ್ಥಿಯಾಗಿ ಹಡಗದಲ್ಲಿ ಪ್ರಯಾಣಿಸುತ್ತಿರಲು, ದಾರುಕನೆಂಬ ರಾಕ್ಷಸನು ಆ ಹಡಗವನ್ನು ಮುತ್ತಿ ಅಲ್ಲಿಯ ಯಾತ್ರಿಕರನ್ನೆಲ್ಲ ತನ್ನ ಸೆರೆಯಾಳಾಗಿ ಮಾಡಿಕೊಂಡನು. ಆಗ ಶಿವಭಕ್ತನಾದ ವೈಶ್ಯನು ಅನನ್ಯ ಭಕ್ತಿಯಿಂದ ಶಿವಕೀರ್ತನೆಯನ್ನು ಮಾಡಹತ್ತಿದನು. ಆತನ ಅನುಚರರೂ ಕೂಡ ಮಾಡತೊಡಗಿದರು. ಇದನ್ನು ಕಂಡು ಆ ದೈತ್ಯನು ಸಿಟ್ಟಿನಿಂದ, "ಶಿವಕೀರ್ತನೆಯನ್ನು ಬಂದು ಮಾಡದಿದ್ದರೆ ನೀವೆಲ್ಲರೂ ಘೋರ ಪರಿಣಾಮವನ್ನು ಎದುರಿಸಬೇಕಾಗುವು-ದೆಂದು ಎಚ್ಚರಿಸಿದನು. ಇದಕ್ಕೆ ವೈಶ್ಯನು ಇಂಬುಗೊಡದೆ ಶಿವಸ್ತುತಿಯನ್ನು ನಿಲ್ಲಿಸಿಲು ನಿರಾಕರಿಸಿದನು. ಇದರಿಂದ ಮತ್ತಷ್ಟು ಕುಪಿತನಾದ ಆ ರಾಕ್ಷಸನು ಸುಪ್ರಿಯನನ್ನು ಸಂಹರಿಸಲು ಉದ್ಯುಕ್ತನಾಗಲು, ಆ ಕ್ಷಣದಲ್ಲಿಯೇ ಭಕ್ತರ ರಕ್ಷಕನಾದ ಶಿವನು ಭಯಂಕರ ರೂಪವನ್ನು ತಾಳಿ ಪ್ರತ್ಯಕ್ಷನಾಗಿ ಮಹಾಮಾರಕಾಸ್ತ್ರವನ್ನು ಸುಪ್ರಿಯನಿಗಿತ್ತು ಅದರಿಂದ ರಾಕ್ಷಸನನ್ನು ಸಂಹಾರ ಮಾಡಲು ಹೇಳಿದನು. ಅದರಂತೆ ಸುಪ್ರಿಯನು ಆ ಮಾರಕಾಸ್ತ್ರದಿಂದ ಆ ರಾಕ್ಷಸನನ್ನು ಸಂಹಾರ ಮಾಡಿ ಬಂದಿಯಾಗಿದ್ದ ತನ್ನ ಸಹ ಯಾತ್ರಿಕನನ್ನು ಬಿಡುಗಡೆ ಮಾಡಿದನು. ನಂತರ ಆ ಎಲ್ಲ ಭಕ್ತರ ಆಗ್ರಹದ ಮೇರೆಗೆ ಆಘಾರ್ದಕ ಅಮೃತ ಕುಂಡದ ಬಳಿಯಲ್ಲಿ ದಿವ್ಯ ಜ್ಯೋತಿರ್ಲಿಂಗವಾಗಿ ರೂಪ ತಾಳಿ ಶಿವನು ಶಾಶ್ವತವಾಗಿ ಅಲ್ಲಿಯೇ ಉಳಿದನು. ಆ ಭಾಗದಲ್ಲಿ ಆಗ ಅಲ್ಲಿದ್ದ

ಆದಿವಾಸಿ ನಾಗಾಜನಾಂಗವು ಈ ಜ್ಯೋತಿರ್ಲಿಂಗದ ಪೂಜೆಯನ್ನು ಮಾಡಿ ಭಕ್ತಿಯಿಂದ ನಡೆದುಕೊಂಡ ನಿಮಿತ್ತ ಈ ಲಿಂಗವನ್ನು ನಾಗನಾಥನೆಂದು ಕರೆಯುವರು. ಶಿವನಿಂದಲೇ ವರ ಪಡೆದುಕೊಂಡು ಆತನಿಂದಲೇ ನಾಶವಾದ ದಾರುಕ ದೈತ್ಯನೂ ಕೂಡ ಶಿವಭಕ್ತನೇ ಆದ್ದರಿಂದ ಆ ಭಕ್ತನ ಇಚ್ಛೆಯ ಮೇರೆಗೆ ಶಿವನು ಜ್ಯೋತಿರ್ಲಿಂಗ ರೂಪವನ್ನು ಧಾರಣಮಾಡಿ ಪಾರ್ವತಿಸಹಿತ ದಾರುಕಾ ವನದಲ್ಲಿ ನೆಲಸಿದನು. ಅದಕ್ಕೆ ಇಲ್ಲಿಯ ಅರಣ್ಯಕ್ಕೆ ದಾರುಕಾ ವನವೆಂದು ಹೆಸರು ಬಂದಿತು.

೨) ಮತ್ತೊಂದು ಹಿನ್ನೆಲೆಯೂ ಉಂಟು. ದಕ್ಷಪ್ರಜಾಪತಿಯು ಮಹಾ ಯಜ್ಞವನ್ನು ಮಾಡುವಾಗ ತನ್ನ ಅಳಿಯನಾದ ಭಗವಾನ್ ಶಂಕರನನ್ನು ಆಮಂತ್ರಿಸಲಿಲ್ಲವೆಂದು ಮನನೊಂದು, ಇದೊಂದು ಅವಮಾನವೆಂದೂ ತಿಳಿದು ಶಿವನ ಪತ್ನಿ ಅಗ್ನಿ ಕುಂಡದಲ್ಲಿ ಹಾರಿ ಆತ್ಮಾಹುತಿಯನ್ನು ಮಾಡಿಕೊಂಡಳು. ಇದರಿಂದ ವ್ಯಥಿತನಾದ ಶಂಕರನು ಅತ್ತಿತ್ತ ಅಲೆಯುತ್ತ ಆಮರ್ದವೆಂಬ ವಿಶಾಲವಾದ ಹೋಡದ ದಡದಲ್ಲಿ ಬಂದು ನಿಂತನು. ಯಾವ ಸ್ಥಳದಲ್ಲಿ ಆತನಿಗೆ ಅವಮಾನವಾಗಿತ್ತೋ ಅಲ್ಲಿಯೇ ತನ್ನ ದೇಹವನ್ನು ಸುಟ್ಟು ಭಸ್ಮಮಾಡಿಕೊಂಡನು. ಅದನ್ನೇ ಅಮರ್ದಕ ( ಅಮೃತ ) ಜಲಾಶಯದಲ್ಲಿ ವಿಸರ್ಜಿಸಿ ಅಲ್ಲಿ ಜ್ಯೋತಿರ್ಲಿಂಗದ ರೂಪದಲ್ಲಿ ಒಳಗೆ ಉಳಿದು ಬಿಟ್ಟನು.

ಮುಂದೆ ಪಾಂಡವರು ವನವಾಸ ಕಾಲದಲ್ಲಿ ಈ ಅಮೃತಕುಂಡದ ಬದಿಯಲ್ಲಿ ಆಶ್ರಮ ಕಟ್ಟಿಕೊಂಡಿದ್ದರು, ಅವರ ಆಕಳೊಂದು ದಿನಾಲು ಆ ಜಲಕುಂಡಕ್ಕೆ ಬಂದು ಜಲಪಾನ ಮಾಡಿದ ನಂತರ ಆ ಜಲಕುಂಡದಲ್ಲಿ ತನ್ನ ಮೊಲೆ ಹಾಲನ್ನು ಸುರಿಸುತ್ತಿದ್ದಿತು. ಒಮ್ಮೆ ಈ ಕೃತಿಯನ್ನು ಭೀಮಸೇನನು ನೋಡಿ ಚಕಿತನಾಗಿ ಹೋಗಿ ಧರ್ಮರಾಜನಿಗೆ ತಿಳಿಸಿದನು. ಇದನ್ನರಿತ ಧರ್ಮರಾಜನು; ಆ ಸ್ಥಳದಲ್ಲಿ ದಿವ್ಯ ದೈವ ಶಕ್ತಿ ಇರಲೇಬೆಕೆಂದು ಗ್ರಹಿಸಿ ಆ ಕುಂಡದ ನೀರನ್ನು ಹೊರತೆಗೆಯ ಹತ್ತಲು; ಅರ್ಧನೀರನ್ನು ತೆಗೆಯುವಷ್ಟರಲ್ಲಿ ಕುದಿದನೀರು ಹೊರಡಹತ್ತಿತು ಆಗ ಭೀಮನು ತನ್ನ

ಗಧೆಯಿಂದ ಮೂರು ಸಲ ಪ್ರಹಾರಮಾಡಿ ಆ ಕುದಿಯುವ ನೀರನ್ನೆಲ್ಲ ತೆಗೆದನು. ಆಗ ಆ ನೀರಿನ ತಳದಲ್ಲಿ ಜ್ಯೋತಿರ್ಮಯವಾದ ಈಶ್ವರ ಲಿಂಗವಂದು ಕಂಡು ಬಂದಿತು. ಆ ಲಿಂಗವನ್ನು ಮೇಲಕ್ಕೆತ್ತಿ ಧರ್ಮರಾಜನು ಪೂಜೆಗೈದು ಅಲ್ಲೊಂದು ಗುಡಿಯನ್ನು ಕಟ್ಟಿಸಿದನು. ಭೀಮನು ಮೂರು ಸ್ಥಳದಲ್ಲಿ ಪ್ರಹಾರ ಮಾಡಿದಲ್ಲಿಯೂ; ಖಂಡೇಶ್ವರ, ಕನಕೇಶ್ವರ ಮತ್ತು ಪದ್ಮಾವತಿ ಈ ಮೂವರಿಗೂ ಗುಡಿಗಳನ್ನು ಕಟ್ಟಿಸಿದರಂತೆ.

"ಅಮರ್ದಕಂ ಇದಂ ಕಾಶೀ ದುಗ್ಧೇಯಂ ಕಿಲಜಾನ್ಹವಿ
ವಿಶ್ವೇಶೋ ನಾಗನಾಥೋಯಂ ಭವಾನಿ ಕನಕೇಶ್ವರೀ"॥

ಈ ಜ್ಯೋತಿರ್ಲಿಂಗವು ಮಹಾರಾಷ್ಟ್ರದ ಮರಾಠಾವಾಡಾ ಭಾಗದ ಪರಭಣಿ ಜಿಲ್ಹೆಯ ದಾರುಕಾ ಎಂಬ ವನದಲ್ಲಿ ಔಂಢ್ಯನಾಗನಾಥನೆಂಬ ಹೆಸರಿನಿಂದಿರುವುದು. ಈ ಪರಿಸರದಲ್ಲೆಲ್ಲ ವನಶ್ರೀ ಕುಣಿಯುತ್ತಿರುವಳು. ಈ ಕ್ಷೇತ್ರವನ್ನು ಸಂದರ್ಶಿಸಿ ಬರಲು ಸಾಕಷ್ಟು ಅನುಕೂಲತೆಗಳುಂಟು.

ನಾಗೇಶ್ವರ ಮಂದಿರವು ಶಿಲ್ಪಚಾತುರ್ಯದ ಒಂದು ಉತ್ತಮ ನಮೂನೆಯ ದ್ಯೋತಕ. ಪಾಂಡವರಕಾಲದಿಂದ ಕಟ್ಟಿದ ಮಂದಿರದ ಕಟ್ಟಡ ಒಂದಿಷ್ಟು ಅಲುಗಾಡದೇ ನಿಂತಿದೆ. ಮಂದಿರದ ಒಳಭಾಗದ ಸಭಾಮಂಟಪವು ಎಂಟು ಕಂಬಗಳ ಮೇಲೆ ದ್ವಾದಶ ಕೋನಗಳಲ್ಲಿ ವರ್ತುಲಾಕಾರ ವಾಗಿರುವುದು. ಆದರೆ, ನಾಗೇಶ ಲಿಂಗವು ಮಾತ್ರ ಅತಿ ತಳದಲ್ಲಿ ಚಿಕ್ಕದಾಗಿ ಕಾಣುವುದು.

ಇಲ್ಲಿ ಈಶ್ವರನ ಮುಂದೆ ನಂದಿ ಇರುವುದಿಲ್ಲ. ಮುಖ್ಯ ಮಂದಿರದ ಹಿಂಭಾಗದಲ್ಲಿ ನಂಧೀಶ್ವರನ ಸ್ವತಂತ್ರ ಮಂದಿರವಿದೆ. ಮುಂಬದಿಯಲ್ಲಿ ಹನ್ನೆರಡು ಚಿಕ್ಕ ಚಿಕ್ಕ ಲಿಂಗದ ಗುಡಿಗಳನ್ನು ಕಟ್ಟಿರುವರು. ವೇದವ್ಯಾಸ ಲಿಂಗ, ಭಂಡಾರೇಶ್ವರ ಲಿಂಗ, ಚಿಂತಾಮಣೇಶ್ವರ ಲಿಂಗ, ನೀಲಕಂಠೇಶ್ವರ ಗಣಪತಿ, ದತ್ತಾತ್ರೇಯ, ಮುರಲೀ ಮನೋಹರ, ದಶಾವತಾರ ಎಂದು

ಅನೇಕ ಗುಡಿಗಳೂ, ಮೂರ್ತಿಗಳೂ, ತೀರ್ಥಗಳೂ ಇರುವವು. ಈ ಕ್ಷೇತ್ರದಲ್ಲಿ ೧೦೮ ಶಿವಾಲಯಗಳೂ ೬೮ ತೀರ್ಥಗಳೂ ಉಂಟು.

ನಾಗನಾಥವೆಂಬ ತೀರ್ಥದ ಕಟ್ಟುವಿಕೆಯು ವೈಶಿಷ್ಟ್ಯ ಪೂರ್ಣವಾಗಿದ್ದು ಅಲ್ಲಿಯೇ ಚಿಕ್ಕದಾದ ಮತ್ತೊಂದು ಋಣ ವಿಮೋಚನ ತೀರ್ಥವಂದಿರುವುದು. ಇವೆರಡೂ ತೀರ್ಥಗಳ ಮಿಲನವು ಅತ್ತೆಸೊಸೆ ಕುಂಡ ವೆಂದೆನಿಸಿರುವುದು. ಈ ನಾಗನಾಥ ತೀರ್ಥದಲ್ಲಿ ಪ್ರತಿ ೧೨ ವರುಷಕ್ಕೊಮ್ಮೆ ಕಪಿಲಾಷ್ಟಮಿಯಂದು ಕಾಶಿಯಿಂದ ಗಂಗಾ ಬಂದು ಕೂಡುವಳು. ಆ ಸಮಯದಲ್ಲಿ ಈ ಕುಂಡದ ಜಲವು ಅತ್ಯಂತ ಸ್ವಚ್ಛವಾಗಿದ್ದು ಸ್ಫಟಿಕದಂತೆ ಹೊಳೆಯುವುದು.

ಔಂಢ್ಯನಾಥನ ಕ್ಷೇತ್ರದಲ್ಲಿ ೧೨೧೨ರಲ್ಲಿ ಸಂತ ಗೋರಾಕುಂಬಾರನ ಮನೆಯಲ್ಲಿ ಸಂತರ ಸಂಗ ಕೂಡಿತ್ತಂತೆ. ಆಗ, ಸಹಜ ವಿನೋದಕ್ಕಾಗಿ ಆ ಕುಂಬಾರನು ಪ್ರತಿಯೊಬ್ಬ ಸಂತನ ತಲೆಯ ಮೇಲೆ ಮಣ್ಣಿನ ಮಡಿಕೆ ಯನ್ನಿಟ್ಟು ಬಾರಿಸಿ, ನಾಮದೇವರ ಮಡಿಕೆಯು ತಲೆ ಇನ್ನು ಕಳಿತಿಲ್ಲವೆಂದು ಹೇಳಿದನಂತೆ. ಇದರಿಂದ ನಾಮದೇವನಿಗೆ ಸಿಟ್ಟು ಬಂದು ಪಂಡರಪೂರಕ್ಕೆ ಹೋಗಿ ವಿಠೋಬನಿಗೆ ಈ ಸಂಗತಿಯನ್ನು ತಿಳಿಸಲು, "ನೀನು ಇನ್ನೂ ಗುರುಗಳನ್ನು ಪಡೆದುಕೊಂಡಿಲ್ಲ. ಅದಕ್ಕೆ ನಿನ್ನ ಮಣ್ಣಿನ ತಲೆ ಕಚ್ಚಾ ಇದೆ." ಎಂದು ವಿಠೋಬನು ಹೇಳಿದನು. ನಂತರ ನಾಮದೇವ ಪುನಃ ಔಂಢ್ಯಕ್ಕೆ ಬಂದು ಗುರುವಿನ ಅನ್ವೇಷಣೆಯನ್ನು ಮಾಡಲು ನಾಗನಾಥ ಮಂದಿರವನ್ನು ಪ್ರವೇಶ ಮಾಡಲು ಅಲ್ಲೊಂದು ಆಶ್ಚರ್ಯದ ಘಟನೆಯೊಂದನ್ನು ಕಂಡರು. ಅದೇನೆಂದರೆ; ವಿಸೋಬಾ ಖೇಚರ ಎಂಬ ಒಬ್ಬ ವಯೋವೃದ್ಧ ಶಿವಭಕ್ತನು ನಾಗೇಶ ಜ್ಯೋತಿರ್ಲಿಂಗದ ಮೇಲೆ ಮೆಟ್ಟುಗಳುಳ್ಳ ತನ್ನ ಕಾಲುಗಳನ್ನು ಇಟ್ಟು ಸ್ವಸ್ಥವಾಗಿ ಮಲಗಿದ್ದನು. ಇದನ್ನು ಕಂಡು ನಾಮದೇವರು, "ಮಹಾನುಭಾವಾ ದೇವರ ತಲೆಯ ಮೇಲೆ ಕಾಲಿಟ್ಟಿರುವಿಯಲ್ಲ?" ಎನ್ನಲು, ಆ ವ್ಯಕ್ತಿಯು, ನಾನು ಅಶಕ್ತನಿರುವೆ. ಆದ್ದರಿಂದ ನನ್ನ ಕಾಲುಗಳನ್ನು ತೆಗೆದು ಬೇರೆ ಕಡೆ ಸರಿಸು. ಎನ್ನಲು, ನಾಮದೇವ ಆ ಕಾಲುಗಳನ್ನು ಬೇರೆಡೆಗೆ ಸರಿಸಿದರೂ. ಅವು ಮತ್ತೊಂದು ಶಿವಲಿಂಗದ ಮೇಲೆಯೇ

ಇದ್ದುದನ್ನು ಕಂಡು ನಾಮದೇವರಿಗೆ ಆಗ ಜ್ಞಾನೋದಯವಾಯಿತು. ಆಗ ಆತನನ್ನೇ ತಮ್ಮ ಗುರುಗಳನ್ನಾಗಿ ಸ್ವೀಕರಿಸಿದರು. ಮತ್ತು ಸರ್ವತ್ರದಲ್ಲಿಯೂ ಪರಮಾತ್ಮನಿರುವನು. ಅವನಿಲ್ಲದ ಸ್ಥಳವಿಲ್ಲ. ಅವನಿಲ್ಲದೆ ಒಂದು ಹುಲ್ಲು-ಕಡ್ಡಿಯೂ ಅಲುಗಾಡುವುದಿಲ್ಲ ಎಂಬ ಉಪದೇಶದ ತತ್ವವನ್ನು ಆ ವಿಸೋಬಾ ಅವರಿಂದ ತಿಳಿದುಕೊಂಡರು. ಆಗ ಅವರ ಕಚ್ಚಾ ಮಡಿಕೆ ಪಕ್ವವಾಯಿತು. ಆ ಜ್ಞಾನಿ ವಿಸೋಬಾ ಅವರ ಸಮಾಧಿಯು ಇಲ್ಲಿದ್ದು ಅವರಿಗೆ ಗುರುಸ್ಥಾನ ಸಿಕ್ಕು ಪ್ರಸಿದ್ಧರಾಗಿರುವರು.

ಒಮ್ಮೆ ಸಂತನಾಮ ದೇವರು ನಾಗನಾಥನ ಸನ್ನಿಧಿಯಲ್ಲಿ ಕೀರ್ತನೆಯನ್ನು ಮಾಡುವ ಸಮಯದಲ್ಲಿ; ಓರ್ವಬ್ರಾಹ್ಮಣ ಗುರು ಗರ್ಭಗುಡಿಯಲ್ಲಿ ರುದ್ರಾಭಿಷೇಕವನ್ನು ಮಾಡುತ್ತಿರಲು, ಕೀರ್ತನೆಯ ಧ್ವನಿಯಲ್ಲಿ ರುದ್ರಾಭಿಷೇಕದ ಮಂತ್ರಪಠಣ ಸರಿಯಾಗಿ ಕೇಳದ ಕಾರಣ, ಆ ಬ್ರಾಹ್ಮಣನು ಒದರುತ್ತ ನಾಮದೇವರಿಗೆ; ಮಹಾಶಯಾ ನಿನ್ನ ಅಭಂಗ ಧ್ವನಿಯನ್ನು ಬಂದು ಮಾಡು, ಅಪೇಕ್ಷೆಯಿದ್ದರೆ ಮಂದಿರದ ಹೊರಗಡೆ ಎಲ್ಲಿಯಾದರೂ ಹೋಗಿ ನಿನ್ನ ಕೀರ್ತನೆಯ ಕಂಠಶೋಷಣೆ ಮಾಡು." ಎಂದು ಹೇಳಲು; ಸಂತನಾಮದೇವರು ತಮ್ಮ ಸಕಲ ಸಲಕರಣೆಗಳೊಂದಿಗೆ ಅಲ್ಲದೆ ನೆರೆದ ಶ್ರೋತೃಗಳನ್ನು ಕರೆದೊಯ್ದು ಮಂದಿರದ ಹಿಂಬದಿಯಲ್ಲಿ ತಮ್ಮ ಕೀರ್ತನೆಯನ್ನು ಮಾಡ ಹತ್ತಿದರು. ಆಗ; ಆಶ್ಚರ್ಯವೆಂಬಂತೆ ಮಂದಿರವೂ ಕೂಡ ಸಂತನಾಮ ದೇವರ ಜೊತೆಗೆ ತಿರುಗಿತು. ಇದರ ಮರ್ಮವೇನೆಂದರೆ ನಾಗನಾಥನೂ ನಾಮದೇವರ ಕೀರ್ತನವನ್ನು ಕೇಳಲು ತಿರುಗಿ ನಿಂತನಂತೆ. ಆ ಬ್ರಾಹ್ಮಣನು ಓಡಿಬಂದು ಸಂತನಾಮದೇವರಿಗೆ ಕೈಮುಗಿದು ಕ್ಷಮೆ ಕೇಳಿದನಂತೆ. ಈ ಕಥೆ ಹಾಗೂ ಸ್ಮಾರಕಗಳು ಈಗಲೂ ಲಭ್ಯ.

ಔರಂಗಜೇಬನು ಈ ನಾಗೇಶ ಮಂದಿರವನ್ನು ಧ್ವಂಸ ಮಾಡಲುದ್ಯುಕ್ತನಾದ ಸಮಯದಲ್ಲಿ ಸಾವಿರಾರು ಗುಂಗೀಹುಳಗಳು ಮಂದಿರದ ತುಂಬೆಲ್ಲ ನುಗ್ಗಿ ಔರಂಗಜೇಬನನ್ನು ಮುತ್ತಿದವನಂತೆ. ಇದರಿಂದ ಭಯಪಟ್ಟು ಆತನು ಆ ಕೆಲಸವನ್ನು ಅಷ್ಟಕ್ಕೆ ಬಿಟ್ಟು ಹೊರಟು ಹೋದನಂತೆ. ಆ ಅರ್ಧಂಭರ್ಧ ಧ್ವಂಸವಾದ ಮಂದಿರವನ್ನು ಭಕ್ತರು ಪುನಃ ಹೊಸದಾಗಿ ಕಟ್ಟಿಸಿದರಂತೆ.

ನಾಗನಾಥನ ಲಿಂಗದ ಮೇಲೆ ಆಗಾಗ ಹೆಡೆಬಿಚ್ಚಿದ ಬೃಹದಾಕಾರದ ಸರ್ಪವೊಂದು ಕಾಣುತ್ತದೆಂದು ಭಕ್ತರು ಹೇಳುತ್ತಾರೆ. ಮತ್ತು ಪಾತ್ರೆಯ ಸಮಯದಲ್ಲಿ ಪಾತ್ರೆಯಲ್ಲಿಟ್ಟ ಹಾಲನ್ನು ಯಾವಾಗಲೋ ಕುಡಿದು ಹೋಗುತ್ತ ದೆಂಬುದು ಮಾತ್ರ ಯಾರಿಗೂ ತಿಳಿಯದು. ಇವು ಔಂಢ್ಯನಾಥನ ಚಮತ್ಕಾರಗಳು.

"ಏತದ್ಯ ಶ್ರುಣುಯಾನ್ನಿತ್ಯಂ ನಾಗೇಶೋದ್ಭವಮಾದರಾತ್ ॥
ಸರ್ವಾನ್ ಕಾಮಾನಿ ಯಾದ್ಧೀಮಾನ್ ಮಹಾಪಾತಕನಾಶನಾನ್ ॥

( ಯಾವನೇ ಬುದ್ಧಿವಂತ ಮನುಷ್ಯನು ಪೂಜ್ಯಭಾವನೆಯಿಂದ ಭಗವಂತನಾದ ನಾಗೇಶ್ವರನ ಕಥನವನು ಶ್ರವಣ ಮಾಡುವನೋ ಅವನ ಪಾಪಗಳು ಪರಿಹರಿ-ಸಲ್ಪಟ್ಟು ಸಕಲಭೀಷ್ಟಗಳು ನೇರವೇರುವವು. )

ಶ್ರೀ ನಾಗೇಶ್ವರನನ್ನು ಕಿರು ಕವನದಲ್ಲಿ ನೆನೆದಿರುವೆ.

## ಶ್ರೀ ನಾಗೇಶ್ವರ

ದುಷ್ಟ ದಾರುಕನೆಂಬ ರಾಕ್ಷಸ
ಕಷ್ಟಕೊಡುತಲಿ ಭಕ್ತ ಜನರಿಗೆ
ಶಿಷ್ಟ ಸುಪ್ರಿಯ ಭಕ್ತನುಳಿಸಲು
ದೃಷ್ಟಿಗೋಚರನಾದ ಶಂಕರ ॥೧॥

ನಾಗ ವಂಶದ ಜನರು ಪೂಜಿಸಿ
ಭೋಗ ಯೋಗದ ಕನಸು ಕಾಣಲು
ರಾಗ ಚಿಂತನದಿಂದ ನುನಿಸುತ
ನಾಗನಾಥನೆ ಎಂದು ಕರೆದರು ॥೨॥

ಬುದ್ಧಿವಂತರು ಪೂಜ್ಯ ಭಾವದಿ
ಎದ್ದು ನಿಲ್ಲುತ ನಾಗನಾಥನ
ಶ್ರದ್ಧೆಯಿಂದಲಿ ಕಥೆಯ ಕೇಳ್ದೊಡೆ
ಎದ್ದು ಬರುವನು ಪಾಪತೊಳೆಯಲು ॥೩॥

# ೯. ಶ್ರೀ ವಿಶ್ವೇಶ್ವರ

ಉತ್ತರ ಭಾರತದ ಉತ್ತರ ಪ್ರದೇಶ ರಾಜ್ಯದ ಕಾಶಿ ಎಂಬ ಪಟ್ಟಣದಲ್ಲಿ ಈ ಜ್ಯೋತಿರ್ಲಿಂಗವಿರುವುದು. ಈ ಕ್ಷೇತ್ರಕ್ಕೆ ಹೆಚ್ಚು ಮಾರ್ಗದರ್ಶನದ ಅವಶ್ಯಕತೆ ಇರದು. ಯಾರು ಬೇಕಾದವರನ್ನು ಕೇಳಿದರೂ ಕಣ್ಣುಮುಚ್ಚಿ ಅದರ ದಾರಿಯನ್ನು ಹೇಳುವರು. ಅಂದರೆ ಕಾಶಿ ಅಷ್ಟೊಂದು ಪ್ರಸಿದ್ಧ.

ವಿಶ್ವೇಶ್ವರನಿಂದ ಕಾಶಿಗೆ ಮಹತ್ವ ಬಂದಿದೆಯೋ ? ಕಾಶಿಯಿಂದ ವಿಶ್ವೇಶ್ವರನಿಗೆ ಮಹತ್ವ ಬಂದಿದೆಯೋ ? ಎಂಬುದನ್ನು ಹೇಳುವುದು ಕಷ್ಟ ! ಆದರೂ ಸನ್ನಿಧಾನದ ಒಡೆಯನೇ ಶ್ರೇಷ್ಠನಲ್ಲವೇ ?

### ಪೀಠಿಕೆ :

ವಿಶ್ವೇಶ್ವರ ಲಿಂಗವು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದು. ಒಟ್ಟು ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿಯು ಹತ್ತು ಲಿಂಗಗಳಿಗೆ ಏನಕೇನ ಪ್ರಕಾರೇಣ ಪ್ರಾಮುಖ್ಯತೆ ಎದ್ದು ಕಾಣುವುದು. ಉಳಿದೆರಡು ಜ್ಯೋತಿರ್ಲಿಂಗಗಳಾದ ಮಲ್ಲಿಕಾರ್ಜುನ ಮತ್ತು ವಿಶ್ವೇಶ್ವರ ಲಿಂಗಗಳಿಗೆ ಪ್ರಾಧಾನ್ಯತೆ ಇದ್ದರೂ ಇವರು ವಾಸವಾಗಿರುವ ಕ್ಷೇತ್ರಗಳಾದ ಶ್ರೀಶೈಲ ಮತ್ತು ಕಾಶಿಗಳಿಗೂ ಅಷ್ಟೇ ಮಹತ್ವ ಬಂದಿರುವುದೂ ಗೋಚರವಾಗುತ್ತದೆ. ಇವೆರಡರಲ್ಲಿಯೂ ಸ್ವಾಮಿಯಷ್ಟೇ ಸ್ವಾಮಿಯ ಸನ್ನಿಧಾನಗಳಿಗೂ ಹೆಚ್ಚು ವೈಶಿಷ್ಟ್ಯ ಕಂಡುಬರುವುದು. ಆ ಕ್ಷೇತ್ರಗಳ ಪರಿಚಯ ಮಹತಿಗಳನ್ನು ವಿಸ್ತರಿಸಿ ಬರೆಯುವುದು ಪ್ರಸ್ತುತವೆಂದು ನನ್ನ ಭಾವನೆ.

ಒಬ್ಬ ವ್ಯಕ್ತಿಯ ಘನತೆಯಿಂದ ಆತನ ಮನೆತನ ಮುಂದೆ ಬರುತ್ತದೆ, ಮುಂದುವರಿಯುತ್ತದೆ. ನಂತರ ಆ ಹೆಸರು ಮರೆಯಾಗಿ ಉಳಿದರೂ ಆ ಮನೆತನದ ಘನತೆ ಗೌರವಗಳು ಪ್ರಾಧಾನ್ಯತೆ ಪಡೆದು ಆತನ ಮನೆತನದವ-

ನೆಂದು ಉಳಿಯುವುದು ಸಹಜ. ಅದರಂತೆ ಕಾಶೀಪತಿಯಾದ ವಿಶ್ವನಾಥನು ಐಕ್ಯನಾದರೂ ತನ್ನ ಮಹಿಮೆಯನ್ನು ಹುದುಗಿಸಿ ಕಾಶೀ ಕ್ಷೇತ್ರವನ್ನು ಮೆರೆಸಿರುವನು.

## ಪೌರಾಣಿಕ ಹಿನ್ನೆಲೆ :

ಪ್ರಪಂಚದಲ್ಲಿ ಹುಟ್ಟಿಗೆ ಕಾರಣನಾದ ಪರಮೇಶ್ವರನೇ ಈಶ್ವರ. ಶಕ್ತಿ ಸ್ವರೂಪಿಯಾದ ಪ್ರಕೃತಿಯೇ ಪಾರ್ವತಿ. ಇಂತಹ ಶಿವ-ಪಾರ್ವತಿಯು-ರೀರ್ವರೂ ತಮ್ಮ ಮಹದಾನಂದ ರೂಪದಿಂದ ಈ ಪರಮಾನಂದ ಕ್ಷೇತ್ರ-ವಾದ ಕಾಶಿಯಲ್ಲಿ ವಿಹಾರ ಮಾಡತೊಡಗಿದರು. ಪ್ರಳಯಕಾಲ ಒದಗಿದರೂ ಈ ಪ್ರಕೃತಿ ಪುರುಷರೀರ್ವರೂ ಈ ಸ್ಥಳವನ್ನು ಬಿಟ್ಟು ಅಗಲಲಿಲ್ಲ. ಆದ್ದರಿಂದ ಕಾಶೀಕ್ಷೇತ್ರವು ಇವರಿಗೆ ಅವಿಮುಕ್ತ ಕ್ಷೇತ್ರವೆಂದಾಯಿತು. ಈ ಕ್ಷೇತ್ರದಲ್ಲಿ ವಿಹಾರ ಮಾಡುವುದರಿಂದ ಇವರೀರ್ವರಿಗೂ ಅತ್ಯಾನಂದವಾಗುತ್ತಿತ್ತು. ಆದ್ದರಿಂದ ಈ ಕ್ಷೇತ್ರವನ್ನು ಆನಂದವನವೆಂದು ಈಶ್ವರನೇ ಹೆಸರಿಸಿದನಂತೆ.

ಹರಿ-ಹರೇಶ್ವರ ರೂಪಿಯಾದ ಶಿವನು ಪಾರ್ವತಿಯೊಂದಿಗೆ ತನ್ನ ಬಲ-ಬದಿಯ ದೇಹವನ್ನು ಅಮೃತ ತುಂಬಿದ ದೃಷ್ಟಿಯಿಂದ ನೋಡಲಾಗಿ ಆತನ ಶರೀರದ ದಕ್ಷಿಣ ಭಾಗದಿಂದ ಇಂದ್ರನೀಲ ಮಣಿಯಂತೆ ಶಾಮಸುಂದರ ವಿಗ್ರಹವುಳ್ಳ ಭಗವಾನ್ ವಿಷ್ಣು ಆವಿರ್ಭವಿಸಿ ನಿಂತುಕೊಂಡನು. ತ್ರಿಭುವನ ಸುಂದರನೂ, ಶಾಂತಮೂರ್ತಿಯೂ, ಸತ್ವಗಳ ಪರಿಪೂರ್ಣನೂ ಆದ ಶ್ರೀಹರಿಯು ಪುರುಷರಲ್ಲಿ ಉತ್ತಮ. ಆದ್ದರಿಂದ ಆತನಿಗೆ ಪುರುಷೋತ್ತಮ ನೆಂದು ಹೆಸರು ಬಂದಿತು. ಕಾರಣ ಶಿವನು, ನೀನೇ ಮಹಾವಿಷ್ಣು, ನಿನ್ನ ಹೆಸರಿನಿಂದಲೇ ಸಕಲ ವೇದಗಳು ಉದ್ಭವವಾಗಲಿ. ನೀನೇ ಸರ್ವಜ್ಞ ಎಂದು ನುಡಿದನು. ನಂತರ ಪ್ರಕೃತಿ ಮಾತೆಯಾದ ಪಾರ್ವತಿಯೊಂದಿಗೆ ಕೈಲಾಸ ಬಿಟ್ಟು ಆನಂದ ಕಾನನವನ್ನು ಪ್ರವೇಶಿಸಿದನು.

ಆನಂತರ ವಿಷ್ಣು ತನ್ನ ಸುದರ್ಶನ ಚಕ್ರದಿಂದ ಆನಂದವನದಲ್ಲಿ ಅಗೆದು ಸುಂದರವಾದ ಪುಷ್ಕರಣಿಯೊಂದನ್ನು ನಿರ್ಮಿಸಿದನು. ಅದು ಬೆಳ್ಳಗಿನ ಜಲ

ದಿಂದ ತುಂಬಿತು. ಆ ಸಮಯದಲ್ಲಿ ವಿಷ್ಣುವಿನ ಮಣಿಕುಂಡಲವು ಆ ಹೊಂಡದಲ್ಲಿ ಬಿದ್ದಿತಂತೆ. ಆದ್ದರಿಂದ ಆ ಪುಷ್ಕರಣಿಗೆ "ಮಣಿಕರ್ಣಿಕಾ" ಎಂದು ಹೆಸರು ಬಂದಿತೆಂದೂ, ಶಿವರೂಪಿಯಾದ ಜ್ಯೋತಿ ಆ ಸ್ಥಳದಲ್ಲಿ ನಿರಂತರವೂ ಪ್ರಕಾಶಮಾನವಾಗಿ ಉಳಿದದ್ದರಿಂದ ಅದನ್ನು ಕಾಶಿ ಎಂದು ಕರೆದರಂತೆ. ಮತ್ತು ಮುಕ್ತಮಯವಾದ ಕುಂಡಲವು ಉದುರಿ ಬಿದ್ದುದರಿಂದ ಕಾಶಿಯು ಮುಕ್ತಿ ಪ್ರಧಾನವಾದ ಕ್ಷೇತ್ರವಾಗಲೆಂದೂ, ಶಿವಜ್ಯೋತಿಯಿಂದ ಪ್ರಕಾಶಮಾನವಾಗಿ ಕಾಶಿಯಾಗಲಿ ಎಂದೂ ವಿಷ್ಣು ಹೇಳಿದನು. ಮತ್ತು ಕಾಶಿಯಲ್ಲಿ ಮರಣ ಹೊಂದಿದರೆ ಮೋಕ್ಷ ಬರಲೆಂದೂ, ಕಾಶೀ ಕ್ಷೇತ್ರವನ್ನು ಉಚ್ಚರಿಸಿದ ಮಾತ್ರಕ್ಕೆ ಎಲ್ಲ ಪಾಪಗಳೂ ನಾಶವಾಗಲೆಂದೂ ವಿಷ್ಣು ಹೇಳಿದನೆಂದು ಸ್ಕಂದ ಪುರಾಣದಿಂದ ತಿಳಿದು ಬರುತ್ತದೆ.

ಕಾಶಿ ಪರಮೇಶ್ವರನ ರಾಜಧಾನಿ. ಅದು ಭೂಮಿಯ ಮೇಲಿದ್ದರೂ ಭೂಲೋಕದ ಭಾಗವಲ್ಲ. ಅದು ನೆಲದ ಮೇಲಿದ್ದರೂ ಸ್ವರ್ಗಕ್ಕಿಂತ ಮಿಗಿಲು. ಇದೊಂದು ಮುಕ್ತಿದಾಯಕ ಸೋಪಾನ. ಮೂರು ಲೋಕಗಳಿಗೂ ಪಾವನ-ಳಾದ ಗಂಗಾ ತಟಾಕದಲ್ಲಿರುವ ಈ ಕ್ಷೇತ್ರವನ್ನು ದೇವತೆಗಳು ಸೇವಿಸುತ್ತಾರೆ.

"ಕಾಶೀ ಕಾಂಚೀಚ ಮಾಯಾಖ್ಯಾತ್ವಯೋಧ್ಯಾದ್ವಾರವತ್ಯಪಿ
ಮಥುರಾವಂತಿಕಾ ಚೈತಾಃ ಸಪ್ತ ಪುರೋತ್ರ ಮೋಕ್ಷದಾ" ॥

ಕಾಶಿ, ಕಂಚಿ, ಮಾಯಾವತಿ (ಲಕ್ಷ್ಮಣ ಝೂಲಾದಿಂದ ಕನಕಬಲದ ವರೆಗಿನ ಪ್ರದೇಶ), ಅಯೋಧ್ಯಾ, ದ್ವಾರಕಾ, ಮಥುರಾ, ಅವಂತಿ, ಈ ಏಳು ಕ್ಷೇತ್ರಗಳು ಮೋಕ್ಷದಾಯಕ. ಅದರಂತೆ ಶ್ರೀಶೈಲ ಕ್ಷೇತ್ರವು ಮೋಕ್ಷ-ದಾಯಕ. ಶ್ರೀಶೈಲಕ್ಕಿಂತ ಕೇದಾರ ತೀರ್ಥಕ್ಷೇತ್ರ ಶ್ರೇಷ್ಠ. ಕೇದಾರಕ್ಕಿಂತಲೂ ಪ್ರಯಾಗ ತೀರ್ಥಕ್ಷೇತ್ರ ಶ್ರೇಷ್ಠ. ಪ್ರಯಾಗಕ್ಕಿಂತಲೂ ಕಾಶೀ ತೀರ್ಥವು ಸರ್ವಶ್ರೇಷ್ಠ. ಆದ್ದರಿಂದಲೇ ಇದನ್ನು ಮುಕ್ತಿಕ್ಷೇತ್ರವೆಂದು ಕರೆದಿರುವರು. ಯಾತ್ರಿಕರ ಪಾಲಿಗೆ ಇದು ಮುಕ್ತಿಕ್ಷೇತ್ರವಾದರೆ ಶಿವನಿಗೆ ಮಾತ್ರ ವಿಮುಕ್ತಿ ಕ್ಷೇತ್ರ. ಕಾರಣ ಆತನು ಕಾಶಿಯನ್ನು ಬಿಟ್ಟು ಎಲ್ಲಿಯೂ ಕದಲುವುದಿಲ್ಲ.

"ನ ಗಾಯತ್ರೀ ಸಮೋಮಂತ್ರೋ ನ ಕಾಶೀ ಸದೃಶೀ ಪುರಿ
ನ ವಿಶ್ವೇಶ್ವರ ಸಮಂ ಲಿಂಗಂ ಸತ್ಯಂ ಸತ್ಯಂ ಪುನಃ ಪುನಃ" ॥

ಪ್ರಪಂಚದಲ್ಲಿ ಗಾಯಿತ್ರಿ ಮಂತ್ರಕ್ಕೆ ಸಮಾನವಾದ ಮಂತ್ರವಿಲ್ಲ. ಕಾಶಿಗೆ ಸಮನಾದ ನಗರವಿಲ್ಲ. ಕಾಶೀವಿಶ್ವನಾಥನ ಲಿಂಗಕ್ಕೆ ಸಮಾನವಾದ ಲಿಂಗವಿಲ್ಲ. ಈ ಮಾತು ಸತ್ಯವಲ್ಲದೆ ಮತ್ತೆನಲ್ಲ. ಇಲ್ಲಿಯ ಜ್ಯೋತಿರ್ಲಿಂಗ ಸರ್ವಶ್ರೇಷ್ಠ,

"ವಾರಣಾಸೀತು ಭವನ ತ್ರಯಸಾರಭೂತ
ರಮ್ಯಾನೃಣಾನಾಂ ಸಂಗತಿದಾಕೀಲ ಸೇವ್ಯಮಾನಾ
ಅತ್ರಾಗತಾ ವಿವಿಧ ದುಷ್ಕೃತಕಾರಿಣ್ರೋಪಿ
ಪಾಪಕ್ಷಯೇ ವಿರಜಸಃ ಸಮನ ಪ್ರಕಾಶಾಃ ॥

—ನಾರದ ಪುರಾಣ.

'ವಾರಣಾ' ಮತ್ತು 'ಅಸಿ' ಎಂಬ ಎರಡು ನದಿಗಳು ಗಂಗಾನದಿಯಲ್ಲಿ ಸಂಗಮಿಸುವವು. ಈ ಸಂಗಮದ ಸ್ಥಳದಲ್ಲಿ ಪ್ರಾಚೀನ ಕಾಲದ ದಿವ್ಯ ನಗರವಂದಿದೆ. ಅಲ್ಲಿ ಕಾಶಿ ಎಂಬ ಸಮಾಜವಂದು ವಾಸಿಸುತ್ತಿದ್ದಿತು, ಅದಕ್ಕೆ ಈ ನಗರವನ್ನು ವಾರಣಾಸಿ ಎಂದೂ, ಕಾಶಿ ಎಂದೂ ಕರೆದಿರುವರು. ಇಲ್ಲಿ ಉತ್ತರವಾಹಿನಿಯಾದ ಗಂಗಾನದಿ ಧನುಷ್ಯದ ಆಕಾರದಲ್ಲಿ ಪ್ರವಾಹವಾಗಿ ಹರಿಯುವುದರಿಂದ ಗಂಗಾನದಿಗೆ ಇಲ್ಲಿ ಮಹತ್ವ ಬಂದಿದೆ. ದೇವೋದಾಸ ನೆಂಬ ರಾಜನು ಈ ಕ್ಷೇತ್ರವನ್ನು ವಿಸ್ತರಿಸಿದನಂತೆ.

ಹಿಮಾಲಯದ ಕೈಲಾಸದಿಂದ ಮತ್ತೆಲ್ಲಿಯಾದರೂ ಪ್ರಶಸ್ತವಾದ ನಿವಾಸ ಸ್ಥಾನವನ್ನು ಶೋಧಿಸಲು ಪಾರ್ವತಿಯು ಶಿವನಿಗೆ ಸೂಚಿಸಿದಳಂತೆ. ಆಗ ಶಿವನು ದೇವೋದಾಸನ ವಾರಣಾಸಿಯನ್ನು ಆಯ್ಕೆ ಮಾಡಿದನು, ಅಲ್ಲಿ ಶಾಂತತೆ, ಪ್ರಶಾಂತತೆ ಬೇಕೆಂಬ ಕಾರಣದಿಂದ ನಿಶುಂಭನೆಂಬ ಶಿವಗಣನು ಆ ಭಾಗವನ್ನು ನಿರ್ಜನವನ್ನಾಗಿ ಮಾಡಲುಪಕ್ರಮಿಸಿದನು. ಈ ಅತಿಕ್ರಮಣ ವನ್ನು ಸಹಿಸದ ದೇವೋದಾಸನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ

ಅತನ ಮಧ್ಯಸ್ಥಿಕೆಯಿಂದ ತನ್ನ ಸ್ಥಳವನ್ನು ಭದ್ರಪಡಿಸಿಕೊಂಡನು. ನಂತರ ಬ್ರಹ್ಮನ ಆಜ್ಞಾನುಸಾರ ಶಿವನು ಆ ಸ್ಥಳವನ್ನು ಬಿಟ್ಟು ಮಂದಾಚಲ ಪರ್ವತದೆಡೆಗೆ ಹೋಗಬೇಕಾಯಿತು.

ಕಾಶಿಯಲ್ಲಿ ವಾಸ ಮಾಡಬೇಕೆಂಬ ತನ್ನ ಬಯಕೆಯನ್ನು ಶಿವನು ಅನೇಕ ದೇವತೆಗಳ ಮೊರೆಹೊಕ್ಕನು. ಕೊನೆಗೆ ವಿಷ್ಣು ದೇವೋದಾಸನಿಗೆ ತಿಳಿಹೇಳಲು ಆತನು ಕಾಶಿಯನ್ನು ಬಿಟ್ಟು ತಪೋವನಕ್ಕೆ ತೆರಳಿದನು, ಈ ಪ್ರಕಾರ ಕಾಶಿ ಶಂಕರ-ಪಾರ್ವತಿಯರ ನಿತ್ಯವಾಸವಾಯಿತು,

ಭಗವಾನ್ ಶಂಕರನು ತನ್ನ ತ್ರಿಶೂಲದಿಂದ ಈ ನಗರವನ್ನು ಸೃಷ್ಟಿ ಮಾಡಿದನಂತೆ ಆ ರುದ್ರವಾಸ ಶಿವಪುರಿಯಲ್ಲಿ ಶಿವ ಮತ್ತು ಶಕ್ತಿ ಇವರು ಯಾವಾಗಲೂ ವಿಮುಕ್ತರಾಗಿ; ಶಿವನು ಜ್ಯೋತಿರ್ಲಿಂಗ ರೂಪದಲ್ಲಿಯೂ ಶಕ್ತಿಯೂ ಪಾರ್ವತಿಯ ರೂಪದಲ್ಲಿಯೂ ಇಲ್ಲಿ ವಾಸಮಾಡಿದರು.

ಕಾಶಿ ಎಂದರೆ ಆಕಾಶ ಪ್ರಕಾಶ, ಅ ಸಿ ಅಂದರೆ ಕಾಶೀ ಗೌರೀ ಮುಖ. ೧೨ ಅ ಸಮುಕ್ತ ಕ್ಷೇತ್ರಗಳಲ್ಲಿ ಕಾಶಿಯೂ ಒಂದು.

ಕಾಶಿಯು ಅಜ್ಞಾನದ ನಿದ್ರೆಯಿಂದ ಮಲಗಿದವನಿಗೆ ಜ್ಞಾನಜ್ಯೋತಿಯನ್ನಿತ್ತು ಎಚ್ಚರಿಸುವುದು. ಸಂಸಾರದಲ್ಲಿ ಮುಳುಗುವವರಿಗೆ ಮೋಕ್ಷವಿತ್ತು ಸಲಹುವುದು. ಸಂಸಾರ ಸಾಗರದಲ್ಲಿ ಸಿಕ್ಕು ಮುಳುಗುವವರಿಗೆ ಒಂದು ನೌಕೆ. ಎಂಭತ್ನಾಲ್ಕು ಯೋನಿಗಳಲ್ಲಿ ತಿರುಗುವವರಿಗೆ ಒಂದು ವಿಶ್ರಾಮ ಧಾಮ. ಅನೇಕ ಜನ್ಮಗಳಿಂದ ಹುರಿಗೊಂಡ ಕರ್ಮಸೂತ್ರಗಳನ್ನು ಕತ್ತರಿಸುವ ಕತ್ತರಿ. ಇವಲ್ಲದೆ ಸಚ್ಚಿದಾನಂದ ಮಯನಾದ ಮತ್ತು ಜ್ಯೋತಿರ್ಮಯನಾದ ಈಶ್ವರನ ಭವ್ಯಧಾಮ,

"ಜೀವನ್ನರಃ ಪಶ್ಯತಿ ಭದ್ರ ಲಕ್ಷಮೇವೇಮಂಮಂದತೀ ನೃಪಾಣ ಯಷ್ಮಾತ್
ತಸ್ಮಾನ್ಮಯಾ ವೈವಪುಷೇದ್ಯ ಶೇನ ಪ್ರಾಪ್ತಾಪಿ ಕಾಶಿಕ್ಷಣಭೃಂಗುರೇಣ" ||

ಮನುಷ್ಯನು ಬದುಕಿ ಇದ್ದರೆ ಒಂದು ಲಕ್ಷ ಕಲ್ಯಾಣಗಳನ್ನು ನೋಡುತ್ತಾನೆ. ಎಂದು ಹಿರಿಯರು ಹೇಳುವುದು ಸುಳ್ಳಲ್ಲ. ಏಕೆಂದರೆ ಕ್ಷಣಿಕವಾದ ಈ ಮಾನವ ಶರೀರದಿಂದ ಕಾಶಿಗೆ ಬಂದೆ, ಗಂಗೆಯಲ್ಲಿ ಮಿಂದೆ, ವಿಶ್ವನಾಥನನ್ನು ಸೇವಿಸಿದೆ. ಇವೆಲ್ಲವೂ ನಾನು ಬದುಕಿಯಿದ್ದುದರಿಂದಲೇ ನನಗೆ ಒದಗಿಸುತ್ತವೆ.

" ಭಾಗ್ಯೈರ್ಮೇಧಿಗತಾಹ್ಯನೇಕ ಜನುಷಾ ಸರ್ವಾಘ ವಿಧ್ವಂಸಿನೀ
ಸರ್ವಾಶ್ಚರ್ಯ ಮಯೀಮಯಾ ಶಿವಪುರೀ ಸಂಸಾರ ಸಿಂಧೋಸ್ತರೀ
ಲಬ್ಧಂ ಸಜ್ಜನುಷಃ ಫಲುಕುಲವಲಂ ಚಕ್ರೇ ಪವಿತ್ರಕೃತಂ
ಸ್ವಾತ್ವಾ ಚಾಪಲ್ಯಖಿಲಂ ಕೃತಂ ಶಿವಪುರಂ ಸರ್ವೋಪರಿಷ್ಠಾತ್ ಸ್ಥಿತಂ

ಅನೇಕ ಜನ್ಮಗಳ ಪಾಪರಾಶಿಯನ್ನೆಲ್ಲ ಧ್ವಂಸ ಮಾಡುತ್ತ ಮತ್ತು ಸಂಸಾರ ಸಮುದ್ರದಿಂದ ದಾಟಿಸುವ ನೌಕೆಯಂತಿರುವ ಅತ್ಯಂತ ಆಶ್ಚರ್ಯ-ಕರವಾದ ಶಿವಪುರಿ ಎನಿಸಿದ ಕಾಶಿಯು ನನ್ನ ಜನ್ಮಾಂತರಗಳ ಭಾಗ್ಯದಿಂದ ದೊರಕಿದೆ. ಸತ್ಕುಲದಲ್ಲಿ ಹುಟ್ಟಿ ಮಾಡಿದ ಎಲ್ಲ ಸತ್ಕರ್ಮದ ಫಲವನ್ನು ಇಂದು ನಾನು ಹೊಂದಿದಂತಾಯಿತು. ನನ್ನ ಆತ್ಮ ಪವಿತ್ರವಾಯಿತು. ನನ್ನ ಬಾಳು ಸರ್ವಶ್ರೇಷ್ಠವಾಯಿತು. ಇನ್ನೇನು ಬೇಕು ? ಎಂದು ಮುಂತಾಗಿ ಕಾಶಿಯಾತ್ರೆಯನ್ನು ಮಾಡಿದ ಮಾನವನು ಧನ್ಯತೆಯ ಆನಂದದ ಉದ್ಗಾರ-ಗಳನ್ನು ತೆಗೆಯುತ್ತಾನೆ.

ಗಂಗಾನದಿಯ ಬಗ್ಗೆ ಹೇಳದಿದ್ದರೆ ಕಾಶೀ ಕ್ಷೇತ್ರದ ವರ್ಣನೆ, ವಿಶ್ವನಾಥನ ಮಹಿಮೆ ಇವುಗಳಿಗೆ ಅಷ್ಟೊಂದು ಮೆರಗು ಬರಲಿಕ್ಕಿಲ್ಲ ! ಅಲ್ಲವೆ ? ಮತ್ತು ಪಾಪ ಪರಿಹರಿಸುವ ಗಂಗಾಳ ಬಗ್ಗೆ ತಿಳಿಯುವುದು ಮುಖ್ಯ.

ಭಗೀರಥನು ಮಹಾದೇವನನ್ನು ಆರಾಧಿಸಿ, ಒಲಿಸಿ ಗಂಗೆಯನ್ನು ಭೂಲೋಕಕ್ಕೆ ಕರೆತಂದನು. ಹೀಗೆ, ಮುಂದೆ ಮುಂದೆ ಭಗೀರಥ ಆತನ ಹಿಂದೆ ಹರಿದು ಬರುತ್ತಿದ್ದ ಗಂಗೆಯನ್ನು, ಮಣಿಕರ್ಣಿಕಾ ತೀರ್ಥ ಹಾಗೂ

ಶಿವನಿವಾಸವಾದ ಆನಂದವನ (ಕಾಶಿ) ನಳ ಕಡೆಯಲ್ಲೆಲ್ಲ ಅಲೆದಾಡಿಸಿ ಗಂಗೆಯು ಪ್ರವಾಹವು ಕಾಶಿಯಲ್ಲಿ ಹರಿಯುವಂತೆ ಮಾಡಿದ. ಇಲ್ಲಿ ಗಂಗೆ ಹರಿದು ಬಂದನಂತರ ಕಾಶೀ ಕ್ಷೇತ್ರಕ್ಕೆ ಮತ್ತಷ್ಟು ಮಹಿಮೆ ಬಂದಿತು.

ಗಂಗಾ ಮಹಿಮೆಯನ್ನು ಸ್ವತಃ ಬ್ರಹ್ಮನೇ ಈ ಪರಿ ಹೇಳಿದ್ದಾನೆ:

" ಸ್ನಾನಾತ್ ಪಾನಾಚ್ಚ ಜಸ್ಹ್ನವ್ಯಾಂ ಪಿತೃಣಾಂ ತರ್ಪಣಾತ್ತಥಾ
ಮಹಾಪಾತಕ ವೃಂದಾನಿ ಕ್ಷಯಂ ಯಾಂತಿ ದಿನೇ ದಿನೇ ॥
ಧನ್ಯಾಸಿ ಕೃತಕೃತೋಸಿ ಧನ್ಯಾ ಧನ್ಯಃ ಪುನಃ ಪುನಃ
ಯತ್ವಯಾ ಸೇವಿತಂ ತೀರ್ಥಂ ಪುಣ್ಯಂ ಗಂಗೋತ್ತರಮ್ ಮನೆ " ॥

ಗಂಗಾಪಾನ, ತುಂಗಾ ಸ್ನಾನ ಎಂಬುದೊಂದು ರೂಢಿಯ ಮಾತು.

ವಿಷ್ಣು ಪಾದದಿಂದ ಜನಿಸಿ ಬಂದ ತ್ರಿಪದಗಾಮಿನಿ ಎನಿಸಿ ಕ್ಷಣಾರ್ಧದಲ್ಲಿ ಪಾಪಗಳನ್ನು ಭಸ್ಮ ಮಾಡುವ ಗಂಗಾಮಾತೆ ಕಾಶಿಯಲ್ಲಿ ನೆಲಸಿ ವಿಶ್ವನಾಥನ ಪಾದಕಮಲಗಳನ್ನು ತೊಳೆದು ತಾನೂ ಪವಿತ್ರಳಾಗಿ, ಮುಂದ ಭಕ್ತರನ್ನು ಪವಿತ್ರಳನ್ನಾಗಿ ಮಾಡುವಳು.

ಕಾಶಿಯಲ್ಲಿ ಪುಣ್ಯಪಾವನಳಾದ ಗಂಗೆ, ಜ್ಯೋತಿ ಪ್ರಕಾಶನಾದ ವಿಶ್ವೇಶ್ವರ, ಪವಿತ್ರ ತೀರ್ಥಗಳು ಇವು ಕಾಶಿ ಕ್ಷೇತ್ರವನ್ನು ಎತ್ತರಕ್ಕೆ ಏರಿಸಿವೆ. ಇದೊಂದು ತಪಸ್ಸಿನ ತಾಣ. ( Place of Renance )

" ಇತ್ತೇವಂ ಪ್ರಾರ್ಥಿತಸ್ತೇನ ವಿಶ್ವನಾಥೇನ ಶಂಕರಃ
ಲೋಕಾನಾಮುಪಕಾರಾರ್ಥಂ ತಸ್ಥೌ ತತ್ರಾಪಿ ಸರ್ವರಾಟ್" ॥

( ಸರ್ವಸಮರ್ಥನಾದ ವಿಶ್ವನಾಥ ಪರಮಾತ್ಮನು ಪ್ರಜಾಕೋಟಿಯ ಅನುಗ್ರಹಕ್ಕಾಗಿ, ಅಪಾರ ಅಪೇಕ್ಷೆಯ ಮೇರೆಗೆ ಕಾಶಿಯಲ್ಲಿ ನೆಲಸಿರುವನು. )

ಕಾಶಿ ಕ್ಷೇತ್ರವು ಪವಿತ್ರ ಕ್ಷೇತ್ರವಲ್ಲದೆ ಜ್ಞಾನಪೀಠವೂ ಆಹುದು. ಪ್ರಾಚೀನ ಕಾಲದ ವಿದ್ಯೆಯ ತವರೂರು. ಪಂಡಿತ ಮದನಮೋಹನ ಮಾಲವೀಯರು ಇಲ್ಲಿ ವಿದ್ಯಾಪೀಠವಂದನ್ನು ಸ್ಥಾಪಿಸಿರುವರು. ಇದೊಂದು ಭವ್ಯ-ದಿವ್ಯ-ಸುಂದರ ಜ್ಞಾನಮಂದಿರ. ಕಾಶಿಯು ಪಾಂಡಿತ್ಯದ ತವರೂರೆಂಬು ದನ್ನು ಇನ್ನೂ ಕಾಯ್ದು ಕೊಂಡು ಬಂದಿದೆ.

ಈಗಿನ ಕಾಶೀವಿಶ್ವೇಶ್ವರನ ಮಂದಿರವನ್ನು ೧೭೭೭ರಲ್ಲಿ ಅಹಲ್ಯಾಬಾಯಿ ಹೋಳಕರ ಅವರು ಕಟ್ಟಿಸಿದರಂತೆ. ೧೭೮೫ ರಲ್ಲಿ ಕಾಶಿಯ ರಾಜನಾಗಿದ್ದ ಮನಸಾರಾಮ ಮತ್ತು ಆತನ ಮಗ ಬಲವಂತಸಿಂಗ ಇವರು ವಾರಣಾಸಿಯಲ್ಲಿ ಅನೇಕ ಮಂದಿರಗಳನ್ನು ಕಟ್ಟಿಸಿದರು. ಮಹಾರಾಜಾ ರಣಜಿತಸಿಂಗನು ವಿಶ್ವನಾಥ ಮಂದಿರದ ಶಿಖರಕ್ಕೆ ಸುವರ್ಣಲೇಪನ ಮಾಡಿಸಿದನಂತೆ. ಈ ಮಂದಿರದಲ್ಲಿರುವ ಬೃಹದಾಕಾರದ ಗಂಟೆಯನ್ನು ನೇಪಾಳದ ರಾಜನು ಕೊಟ್ಟಿರುವನು.

ಕಾಶಿಕ್ಷೇತ್ರ ಮತ್ತು ವಿಶ್ವೇಶ್ವರ ಜ್ಯೋತಿರ್ಲಿಂಗಗಳು ಜಗತ್ತಿನಲ್ಲಿಯೇ ಅತ್ಯಂತ ಪವಿತ್ರ, ದರ್ಶನೀಯ, ಪ್ರೇಕ್ಷಣೀಯ, ಆದರಣೀಯ ಶ್ರದ್ಧಾಸ್ಥಾನ ಗಳು. ಇಲ್ಲಿಯ ಗಂಗೋದಕವು ಅಮೃತ, ಕಾಶಿಯಲ್ಲಿ ಮರಣ ಹೊಂದಿದರೆ ಪುನರ್ಜನ್ಮವಿಲ್ಲವೆಂದು ಪ್ರತೀತಿ.

ವಿಶ್ವೇಶ್ವರಂ ಮಾಧವಂ ದುಂಡಿಂ । ದಂಡ ಪಾಣಿಂಚ ಭೈರವಂ ।
ವಂದೇ ಕಾಶೀ ಗುಹಾಗಂಗಾ । ಭವಾನಿ ಮಣಿಕರ್ಣಿಕಾಂ" ॥

ಕನ್ನಡ ಪದ್ಯದಲ್ಲಿ ಶ್ರೀ ವಿಶ್ವೇಶ್ವರನನ್ನು ವರ್ಣಿಸಿರುವೆ-

## ಶ್ರೀ ವಿಶ್ವೇಶ್ವರ

ಕಾಶಿಯಲ್ಲಿ ಮರಣ ಲೇಸು
ಈಶನಲ್ಲಿ ಭಕ್ತಿ ಲೇಸು
ವಿಶ್ವದಲ್ಲಿ ಮಿಗಿಲು ದೇವ
ಭಸ್ಮಬಳಿದುಕೊಂಡ ಶಿವನು ... ॥೧॥

ವಾರಣಾಸಿ ನದಿಯು ಮಿಲನ
ಚಾರುಕೀರ್ತಿತಂದತಾಣ
ಭೂರಿ ಭಕ್ತಿಯುಕ್ಕಿ ಹರಿವ
ಗೌರಿಪತಿಯು ಶಿವನ ಕ್ಷೇತ್ರ ॥೨॥

ಕಾಶಿಕಂಚಿ ಮಾಯಯೋಧ್ಯ
ಮಧುರವಂತಿ ದ್ವಾರದುರ್ಗ
ನಗರವೆಂಬ ನಾಮಸಪ್ತ
ಮೋಕ್ಷಪಡೆವ ತಾಣವಹುದು ॥೩॥

ತಪವಗೈವ ಭೂಮಿಯುಂದು
ವಿಪಿನ ಚರನ ಚರಣಸಂದು
ಜಪವಮಾಡಿ ಮೋಕ್ಷಪಡೆದು
ಶಪಿತಪಾಪ ಕರ್ಮಸರಿದು ॥೪॥

ವಿಶ್ವನಾಥ ನಮಿಪೆ ನಿನಗೆ
ರಶ್ಮಿಜ್ಯೋತಿ ಬೆಳಗಿ ಎನಗೆ
ಕಶ್ಮಲವನು ತೊಳೆದುಸಲುಹು
ಈಶಲಿಂಗ ಭಯವ ಕಳೆದು. ॥೫॥



# ೧೦. ಶ್ರೀ ತ್ರ್ಯಂಬಕೇಶ್ವರ

## ಪೌರಾಣಿಕ ಹಿನ್ನೆಲೆ :

ಪೂರ್ವಕಾಲದಲ್ಲಿ ಗೌತಮರೆಂಬ ಋಷಿಯೊಬ್ಬರಿದ್ದರು. ಅವರ ಪತ್ನಿ ಅಹಲ್ಯೆ. ಪತಿ-ಪತ್ನಿಯರು ಸಹ್ಯಾದ್ರಿ ಪರ್ವತದ ಅಂಚಿನಲ್ಲಿರುವ ಬ್ರಹ್ಮಗಿರಿ ಎಂಬ ಪರ್ವತದಡಿಯಲ್ಲಿ ಆಶ್ರಮ ಮಾಡಿಕೊಂಡು ವೇದಾಧ್ಯಯನದಲ್ಲಿ ನಿರತರಾಗಿರುತ್ತಿದ್ದರು.

ಹೀಗಿರುತ್ತಿರಲು, ಒಮ್ಮೆ ಅವರ ಆಶ್ರಮದ ವನಕ್ಕೆ ಬಂದು ತುಳಿತ-ದಿಂದ ಹಾಳುಮಾಡುತ್ತಿರುವ ಆಕಳೊಂದನ್ನು ಹೊಡೆದೋಡಿಸಲು ದರ್ಭೆ-ಯಿಂದ ಆ ಆಕಳನ್ನು ಹೊಡೆದ ನಿಮಿತ್ತ ಅದು ಸತ್ತುಬಿದ್ದಿತು. ಇವರಿಂದ ಇನ್ನುಳಿದ ಮುನಿಗಳು ; ಗೌತಮರು ಗೋಹತ್ಯಾ ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವೆಂದು, ಪೃಥ್ವಿಯನ್ನು ಮೂರು ಸಲ ಪ್ರದಕ್ಷಣೆ ಮಾಡಿ ಶಿವರೂಪಿಯಾದ ಬ್ರಹ್ಮಗಿರಿಯನ್ನು ಒಂದು ಸಲ ಪ್ರದಕ್ಷಣೆ ಹಾಕಿ.ಭಗವಾನ್ ಶಂಕರನನ್ನು ತಪಸಿಸಿ, ಒಲಿಸಿಕೊಂಡು ಆತನ ಜಡೆಯಲ್ಲಿದ್ದ ಗಂಗೆಯನ್ನು ಭೂಮಿಗೆ ಕರೆತಂದು, ಆ ಗಂಗಾ ಜಲದ ನೂರೊಂದು ಕೊಡಗಳನ್ನು, ತಂದು ಈಗಿರುವ ಬತ್ತಿದ ಜಲಕುಂಡಗಳಲ್ಲಿ ಸುರುವಿದರೆ ಮಾತ್ರ ಅವರ ಗೋಹತ್ಯಾ ಪಾಪ ಪರಿಹಾರವಾಗುವುದೆಂದು ಸೂಚಿಸಿದರು.

ಆ ಪ್ರಕಾರ ಗೌತಮರು ತಪಸ್ಸು ಮಾಡಿ ಶಂಕರನನ್ನು ಒಲಿಸಿಕೊಂಡು ಗಂಗೆಯನ್ನು ತಮ್ಮ ಜೊತೆಗೆ ಕಳಿಸಿಕೊಡಲು ಬಿನ್ನವಿಸಿದರು. ಆಗ ಶಿವನು ತನ್ನ ಜಡೆಯಲ್ಲಿರುವ ಗಂಗೆಗೆ ಇಳಿದು ಹೋಗೆಂದು ಸೂಚಿಸಿದರೂ ಅವಳು ನಿರಾಕರಿಸಿದ್ದರಿಂದ; ಶಿವನು ಸಿಟ್ಟಿನಿಂದ ತನ್ನ ಜಡೆಯಿಂದ ಒಂದು ಕೂದಲೆಳೆಯನ್ನು ಕಿತ್ತೊಗೆಯಲು, ಗಂಗೆ ಅಲ್ಲಿಂದ ಸೀಳು ದಾರಿಯಿಂದ ಕೆಳಗಿಳಿಯು



ಶ್ರೀ ತ್ರಿಂಬಕೇಶ್ವರ

ಬೇಕಾಯಿಯಿತು. ಆದರೆ, ತಾನು ಬ್ರಹ್ಮಗಿರಿಯಲ್ಲಿ ಬಂದು ನಿಲ್ಲುವವಳೇ ವಿನಃ ಭೂಮಿಗೆ ಬರಲಾರೆನೆಂದು ಹಟಹಿಡಿದಳು. ಆಗಲೆಂದು ಗೌತಮರು ಒಪ್ಪಿಕೊಂಡರು.

ಗಂಗೆ ಬ್ರಹ್ಮಗಿರಿಗೆ ಬಂದ ನಂತರ ಇನ್ನುಳಿದ ದೇವತೆಗಳೂ ಬ್ರಹ್ಮಗಿರಿಯ ಪರಿಸರದಲ್ಲಿಯೇ ಬಂದು ಇರಲೆಂದು ಆಗ್ರಹಿಸಿದಳು. ಅವಳ ಅಪೇಕ್ಷೆಯಂತೆ; ಬ್ರಹಸ್ಪತಿಯು ಸಿಂಹರಾಶಿಯಲ್ಲಿ ಬಂದ ಸಮಯದಲ್ಲಿ ಅವರೆಲ್ಲರೂ ಬಂದು ನೆಲಸುವ ಅಭಯವಿತ್ತರು. ಆದ್ದರಿಂದ; ಗುರು, ಸಿಂಹ ರಾಶಿಯಲ್ಲಿ ಸಂಚರಿಸುವವರೆಗೆ ಬ್ರಹ್ಮಗಿರಿಯಲ್ಲಿ ಎಲ್ಲ ದೇವತೆಗಳೂ, ಸಕಲ ತೀರ್ಥಗಳೂ, ಭಾಗೀರಥಿ ನದಿ ಮೊದಲಾದ ನದಿಗಳೂ ಬಂದು ಕೂಡುವವು. ಆ ಪ್ರಕಾರ, ಶಿವನೂ ಈ ಬ್ರಹ್ಮಗಿರಿಯಲ್ಲಿ ಬಂದು ತ್ರಿಯಂಬಕನೆಂಬ ಹೆಸರಿನಿಂದ ಲಿಂಗರೂಪದಲ್ಲಿ ಜ್ಯೋತಿರ್ಮಯನಾಗಿ ಶಾಶ್ವತವಾಗಿ ನಿಂತನಂತೆ. ಆದಕ್ಕೆ ಈ ಲಿಂಗವನ್ನು ತ್ರಿಯಂಬಕೇಶ್ವರ ಲಿಂಗವೆಂದು ಕರೆದಿರುವರು.

ಗಂಗೆಯನ್ನು ಕರೆತಂದು ಬ್ರಹ್ಮಗಿರಿಯಲ್ಲಿ ಬಿಟ್ಟು ಪ್ರಯುಕ್ತ, ಅಲ್ಲಿ ಅವಳು ಗುಪ್ತಗಾಮಿನಿಯಾದಳು. ಗೌತಮರು ಕರೆತಂದ ನಿಮಿತ್ತ ಗೌತಮಿ ಎಂದು ಹೆಸರು ಹೊತ್ತಳು. ಈ ಗೌತಮಿಯನ್ನು ಗೋದಾವರಿ ಎಂದೂ ಕರೆಯುವರು. ಬ್ರಹ್ಮಗಿರಿಯ ಇಲ್ಲಿಯ ಭಾಗವು ಶಿವಲಿಂಗದ ಮಾರಿಯಂತೆ ಕಾಣುತ್ತದೆ. ಬ್ರಹ್ಮಗಿರಿಯನ್ನು ತ್ರಿಯಂಬಕ ಪರ್ವತವೆಂತಲೂ ಕರೆಯುವರು. ಈ ಶಿವಲಿಂಗ ಮಾದರಿಯ ಬ್ರಹ್ಮಗಿರಿಯ ತುದಿಯಲ್ಲಿ ಪವಿತ್ರ ಗೌತಮಿ ಗಂಗಾ ಉಗಮಸ್ಥಾನ. ಅಲ್ಲಿ ಹೊಂಡದಾಕಾರದ ಕುಂಡವಂದಿದ್ದು ಅಲ್ಲಿ ಜಲಸಮೂಹ ವಿರುವುದು. ತ್ರಿಂಬಕೇಶ್ವರ ಮಂದಿರದಿಂದ ಪಾವಟಿಗೆಗಳಿದ್ದು, ಬಹು ಎತ್ತರಕ್ಕೆ ಏರಿದರೆ, ತುದಿಯಲ್ಲಿ ಈ ಕುಂಡವು ಕಾಣುವುದು. 'ಗೋ' ಅಂದರೆ ಆಕಳು. 'ದಾ' ಎಂದರೆ ದಾನಕೊಡುವವಳು. ಹೀಗಾಗಿ ಗೋದಾವರಿಯಾಗಿರುವಳು. ಈ ಗೋದಾವರಿಯ ಉಗಮಸ್ಥಾನವನ್ನು ಗಂಗಾದ್ವಾರವೆಂದೂ ಕರೆದಿರುವರು. ಇಲ್ಲಿ ಗೋಮುಖದಿಂದ ಬಂದ ಜಲಧಾರೆ ಸತತವಾಗಿ ಹೊಂಡದಲ್ಲಿ ಬೀಳುವುದು. ಅಲ್ಲಿ ಅದು ಗುಪ್ತಗಾಮಿನಿಯಾಗಿ ತ್ರಿಂಬಕೇಶ್ವರನ ಸನ್ನಿಧಿಯಲ್ಲಿ

ಹರಿದು ಅನತಿ ದೂರದಲ್ಲಿ ಅಹಲ್ಯಾ ಎಂಬ ಚಿಕ್ಕ ನದಿಯೊಂದನ್ನು ತನ್ನಲ್ಲಿ ಸಂಗಮಿಸಿಕೊಂಡು ಬರಬರುತ್ತ ನಾಸಿಕವೆಂಬ ಕ್ಷೇತ್ರ ನಗರದ ಸನೀಹದಲ್ಲಿ ಪ್ರಕಟಳಾಗಿ, ಪ್ರವಹಿಯಿಸಿ ಮುಂದೆ ಮುಂದೆ ಸಾಗಿ ಸಾಗರವನ್ನು ಸೇರುವಳು. ಇವಳ ಪುಣ್ಯದಿಂದ ನಾಸಿಕ ನಗರಕ್ಕೂ ಪಾವಿತ್ರ್ಯತೆ ಬಂದಿದೆ.

ಬ್ರಹ್ಮಗಿರಿಯ ಪದತಲದಲ್ಲಿ ಹೊಂದಿಕೊಂಡು ತ್ರಿಂಬಕೇಶ್ವರ ದೇವಾಲಯುವಿದೆ. ಈ ಮಂದಿರದ ಗರ್ಭಗುಡಿಯಲ್ಲಿರುವ ಶಿವಲಿಂಗದ ಮೇಲೆ ಇನ್ನಿತರ ಕಡೆ ಇರುವಂತೆ ಪಿಂಡವಿಲ್ಲ. ಆ ಸ್ಥಳದಲ್ಲಿ ಒರಳಿನಾಕಾರದ ಒಂದು ತೆಗ್ಗು. ಆ ತೆಗ್ಗಿನಲ್ಲಿ ಅಂಗುಷ್ಠಾಕಾರದ ಮೂರು ಲಿಂಗಗಳಿರುವವು. ಬ್ರಹ್ಮ, ವಿಷ್ಣು, ಮಹೇಶ್ವರ ಎಂದು. ಅಂದರೆ ತ್ರಿಅಂಬಿಕೇಶ್ವರ ಈ ಮೂರು ಲಿಂಗಗಳಲ್ಲಿ, ಮಹೇಶ್ವರನ ಲಿಂಗದ ಮೇಲೆ ಒಂದು ಪಾತ್ರೆಯಿಂದ ಯಾವಾಗಲೂ ಜಲಧಾರೆ ಬೀಳುತ್ತಿರುವುದೊಂದು ನೈಸರ್ಗಿಕ ಅಭಿಷೇಕ.

ಈ ಜ್ಯೋತಿರ್ಲಿಂಗದಿಂದ ಯಾವಾಗಲಾದರೊಮ್ಮೆ ಸಿಂಹಗರ್ಜನೆ ತರಹ ಶಬ್ದವು ಹೊರ ಬರುವದೆಂದೂ, ಅಗ್ನಿಜ್ವಾಲೆ ಕಂಡು ಬರುವದೆಂದೂ ಹೇಳುವರು. ಆ ಸಮಯದಲ್ಲಿ ಶಿವನು ರೌದ್ರನಾಗಿ ಕೋಪವು ಹೊರಬಾರ ದೆಂಬ ಉದ್ದೇಶದಿಂದ. ಭಂಗ ಮಿಶ್ರಿತ ಕ್ಷೀರವನ್ನು ಕೊಡದಿಂದ ಲಿಂಗದ ಮೇಲೆ ಸುರಿದು ರುದ್ರಾಭಿಷೇಕದ ಪಠಣ ಮಾಡುವರು. ಆ ದುಗ್ಧವೆಲ್ಲವೂ ಸೀಳದಲ್ಲಿ ಇಂಗಿಹೋಗುವುದು. ಅದು ಬರಿದಾಯಿತೆಂದರೆ ಪ್ರಭು ಶಂಕರನು ಶಾಂತನಾದನೆಂದು ತಿಳಿಯಬೇಕು,

## ಐತಿಹಾಸಿಕ ಹಿನ್ನೆಲೆ

ತ್ರಿಂಬಕೇಶ್ವರ ಮಂದಿರವನ್ನು ನಾನಾಸಾಹೇಬ ಪೇಶ್ವೆ ಕಟ್ಟಿಸಿದರಂತೆ. ಮಂದಿರವು ಗಟ್ಟಿಮುಟ್ಟಾದ ಕಲ್ಲುಗಳ ಮೇಲೆ ನಿಂತಿದೆ. ಪ್ರಾಂಗಣವು ಸಾಕಷ್ಟು ವಿಶಾಲವಿದ್ದು ಸಮಾಧಾನವನ್ನು ತರುವುದು. ಪೂರ್ವದಿಕ್ಕಿನ ಮಹಾದ್ವಾರ ಮತ್ತು ಮಂದಿರ ಕಲಾಕೃತಿಯ ಸಂಕೇತ. ದೇವಾಲಯದ ಎದುರುಗಡೆ ನಂದಿ ಮಂದಿರವೂ ಉಂಟು, ಪ್ರತಿ ದಿನವೂ ನಗಾರಿಯ ವಾದ್ಯ ದಿಂದ ಬೆಳಗಿನಲ್ಲಿ ತ್ರಿಂಬಕೇಶ್ವರನನ್ನು ಎಚ್ಚರಿಸುವರು.

ತ್ರಿಂಬಕೇಶ್ವರನಿಗೆ ನಿತ್ಯ ಪೂಜೆ, ಆರತಿ, ನೈವೇದ್ಯಗಳಲ್ಲದೆ ವಿಶೇಷ ಪ್ರಸಂಗಗಳಲ್ಲಿ ಉತ್ಸವಗಳೂ ಜರುಗುವವು, ಆ ಸಮಯದಲ್ಲಿ ತ್ರಿಮೂರ್ತಿಗಳಿಗೂ ವಸ್ತ್ರಾಲಂಕಾರ. ಶಿರಸ್ತ್ರಾಣ, ರತ್ನಖಚಿತ ಮುಕುಟ ಇವೆಲ್ಲವನ್ನು ತೊಡಿಸುವರು. ರತ್ನಖಚಿತ ಕಿರೀಟವನ್ನು ನಾರೋ ಶಂಕರ ಮತ್ತು ದಕ್ಷಿಣ ದೇಶದ ಯಾತ್ರಿಕ ಇಮರೀರ್ಮರೂ ಕೂಡಿ ಸ್ವಾಮಿಗೆ ಅರ್ಪಿಸಿರುವರಂತೆ. ಸರದಾರ ವಿಚುರುಕರ ಎಂಬುವರು ದೇವರಿಗೆ ರಥವನ್ನು ಮಾಡಿಸಿಕೊಟ್ಟಿರುವರು. ಪ್ರತಿ ಸೋಮವಾರವೂ ತ್ರಿಂಬಕೇಶ್ವರನ ಪಾಲಕಿಯು ಕುಶವೃತ್ತದ ವರೆಗೆ ಹೋಗಿ ತಿರುಗಿ ಬರುವ ಪರಿಪಾಠ,

ತ್ರಿಂಬಕೇಶ್ವರನ ಸನೀಹದಲ್ಲಿ ಗೌತಮಿ-ಗೋದಾವರಿಗೆ ಅಹಲ್ಯಾ ಎಂಬ ಚಿಕ್ಕ ನದಿಯೊಂದು ಸಂಗಮಿಸುವುದಷ್ಟೆ ? ನಾಗನಾರಾಂಬಳ ಎಂಬ ವಿಶಿಷ್ಠ ವಿಧಿಯೊಂದನ್ನು ಜರುಗಿಸುವರು. ಪೂರ್ವಕಾಲದಲ್ಲಿ ಅತೃಪ್ತ ಆಶೆಯಿಂದಿದ್ದ ಮೂಲಕ ಅದೆಷ್ಟೋ ಜನರಿಗೆ ಸಂತತಿಯನ್ನು ಪಡೆಯುವುದಕ್ಕಾಗಿ ನಿರ್ಬಂಧ ವಿತ್ತು. ಅದನ್ನು ಮೂರೀಕರಿಸಿ ಸಂತತಿಯನ್ನು ಪಡೆವುದಕ್ಕೋಸ್ಕರ ಈ ವಿಧಿಯಿಂದ ಆ ಬಂಧನವನ್ನು ಮುರಿದನಂತರ ಆದೆಷ್ಟೋ ಜನರಿಗೆ ಸಂತತಿ ಪ್ರಾಪ್ತವಾಯಿತಂತೆ.

"ತತ್ರಗತಂ ಕುರು ಶ್ರಾದ್ಧಂ ಪಿತೄನುದ್ದಿಶ್ಯಯತ್ನತಃ" ॥

ಈ ಬ್ರಹ್ಮಗಿರಿ ಪರ್ವತವನ್ನು ಒಂಭತ್ತು, ಇಪ್ಪತ್ತು ಇಲ್ಲವೆ ಮೂವತ್ತೊಂದು ಸಲ ಪ್ರದಕ್ಷಣೆ ಹಾಕಿದರೆ ಪುಣ್ಯಪ್ರದವೆಂದು ಪ್ರತೀತಿ. ಆದರೆ; ಇದು ಅಷ್ಟು ಸುಲಭವಲ್ಲ. ಬಹಳ ಕಷ್ಟದಾಯಕ. ಪ್ರದಕ್ಷಣೆಯ ಮಾರ್ಗಮಧ್ಯದಲ್ಲಿ; ರಾಮತೀರ್ಥ, ಪ್ರಯಾಗತೀರ್ಥ, ನೃಸಿಂಹತೀರ್ಥ ಎಂದು ಅನೇಕ ರಮ್ಯ ತೀರ್ಥಗಳಿದ್ದು ಪೇಶ್ವೆ ಮಹಾರಾಜರು ಅಲ್ಲಲ್ಲಿ ಮಠಗಳನ್ನು ನಡಿಸಿ ಅಪೇಕ್ಷಿತರಿಗೆ ಅನುಕೂಲ ಮಾಡಿಕೊಟ್ಟಿರುವರು.

ತ್ರಿಂಬಕೇಶ್ವರ ಕ್ಷೇತ್ರವು ಮಹಾರಾಷ್ಟ್ರ ರಾಜ್ಯದ ನಾಸಿಕ ಜಿಲ್ಹೆಯಲ್ಲಿದೆ. ನಾಸಿಕ ನಗರದಿಂದ ಸುಮಾರು ೨೫ಕಿ.ಮೀ.ದೂರದಲ್ಲಿ, ನಾಸಿಕ ನಗರದವರೆಗೂ ರೈಲು ಹಾಗೂ ಬಸ್ಸುಗಳ ಸಂಪರ್ಕ ಉಂಟು. ಮುಂದಿನ ದಾರಿಯನ್ನು

ಬಸ್ಸಿನಿಂದಾಗಲೀ, ಖಾಸಗಿ ವಾಹನದಿಂದಾಗಲೀ ಕ್ರಮಿಸಲು ಸಾಕಷ್ಟು ಅನುಕೂಲತೆಯುಂಟು. ತ್ರಿಂಬಕೇಶ್ವರ ದೇವಸ್ಥಾನವು ಸಮುದ್ರ ಪಾತಳಿಯಿಂದ ಸುಮಾರು ೨೫೦೦ ಅಡಿ ಎತ್ತರದಲ್ಲಿದೆ. ಇದೊಂದು ನಿಸರ್ಗ ರಮಣೀಯ ಸ್ಥಳ. ತಂಪು ಅಲ್ಹಾದಕರ ಹವೆ. ಪವಿತ್ರ ಸ್ಥಳ.

"ಅಂತಃ ಪರಂ ಪ್ರವಕ್ಷಾಮಿ ಮಹಾತ್ಮ್ಯಂ ತ್ರಿಂಬಕೇಶ್ವಚ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಚ್ಯತೆಮಾನವಃ ಕ್ಷಣಾತ್ ॥"

( ತ್ರಿಂಬಕೇಶ್ವರನ ಶ್ರೇಷ್ಠವಾದ ಮಹಾತ್ಮ್ಯೆಯನ್ನು ಕೇಳುವುದರಿಂದ ಮಾನವನ ಪಾಪಗಳೆಲ್ಲವೂ ಕ್ಷಣಮಾತ್ರದಲ್ಲಿ ತೊಲಗಿ ಹೋಗೇವವು. )

ಶ್ರೀ ತ್ರಿಂಬಕೇಶ್ವರನನ್ನು ಪದ್ಯದಲ್ಲಿ ಹಾಡಿರುವೆ.

## ಶ್ರೀ ತ್ರಿಂಬಕೇಶ್ವರ

ಗೌತಮರು ತಪಗೈದು ಗಂಗೆಯನು ಕರೆತಂದು
ಬ್ರಹ್ಮಗಿರಿ ಪರ್ವತದ ಮಡಿಲಲ್ಲಿ ಹುದುಗಿಟ್ಟು
ತ್ರಿಂಬಕೇಶ್ವರ ಪದತೊಳೆಯಲೆಂಬಾಶಯದಿ
ಹರಿಬಿಟ್ಟರವಳನ್ನು ಗೌತಮಿಯು ಎಂದೆನುತ ॥೧॥
ತ್ರಿಂಬಕೇಶ್ವರ ಲಿಂಗಕಭಿಷೇಕ ಗೈಯುತ್ತ
ಸಾಗುತಲಿ ಮುಂದಕ್ಕೆ ತೀರ್ಥಕ್ಷೇತ್ರವ ರಚಿಸಿ
ಪಾಪನಾಶಿನಿಯಾಗಿ ಭಕ್ತಾದಿ ಕುಲಕೆಲ್ಲ
ರಭಸದಲಿ ಕೊಡುವಳು ಸಾಗದ ರಾಜನನು ॥೨॥
ಶಿವಲಿಂಗ ಪಿಂಡವಿಲ್ಲಿಲ್ಲ ಗರ್ಭಗುಡಿಯಲಿ
ಹೆಬ್ಬೆರಳ ಗಾತ್ರದಲಿ ಮೂರು ಶಿವಲಿಂಗಗಳು
ಒರಳಿನಾಕಾರದಾ ತೆಗ್ಗಿನಲಿ ಪೀಠದಡಿ
ಪರಬ್ರಹ್ಮ-ವಿಷ್ಣು-ಶಿವ ತ್ರಿಂಬಕೇಶ್ವರನಾಗಿ ॥೩॥
ತ್ರಿಂಬಕೇಶ್ವರ ಮೇರು ಕಥನ ಕೇಳಿದವರಿಗೆ
ಕ್ಷಣಮಾತ್ರದಲಿ ಪಾಪ ಪರಿಹಾರ ಪಡೆಯುವರು
ಎಣೆಯಿಲ್ಲದನು ಭೂತಿ ದೊರಕುವುದು ಬಲು ಸತ್ಯ
ಪಾಮರರು ಹತಮಿತದಿ ಜಪಿಸಿದರೆ ನಿಜ ಮುಕ್ತಿ ॥೪॥





ಶ್ರೀ ತ್ರಿಂಬಕೇಶ್ವರನ ಸನ್ನಿಧಾನದಲ್ಲಿ
ಲೇಖಕರು ತಮ್ಮ ಸ್ನೇಹಿತರೊಂದಿಗೆ



# ೧೧. ಶ್ರೀ ಕೇದಾರನಾಥ

ಹಿಮಾಲಯ ಪರ್ವತದಲ್ಲಿರುವ ಪವಿತ್ರ ಕ್ಷೇತ್ರ. ಕೈಲಾಸ ಪತಿಯಾದ ಶಿವನ ಭವ್ಯಧಾಮ. ಈ ಮಂದಿರವು ಪ್ರಶಸ್ತ ಬೈಲು ಜಾಗೆಯಲ್ಲಿ ಶ್ರೀಮಂತವಾಗಿ ಬೆಳೆದು ಹಚ್ಚಹಸಿರು ಹುಲ್ಲುಗಾವಲಿನಲ್ಲಿ ನಿಂತಿದೆ. ಹಿಂಬದಿಯ ಭಾಗವೆಲ್ಲ ಹಿಮದಿಂದ ಆಚ್ಛಾದಿತವಾದ ಸಾಲು. ಈ ದೃಶ್ಯ ರುದ್ರಮಣೀಯ. ಈ ಮಂದಿರದ ಪ್ರಧಾನ ದೇವರು ಈಶ್ವರ. ಈ ಸ್ಥಳವು ಸಮುದ್ರ ಪಾತಳಿಯಿಂದ ೧೧,೭೫೦ ಅಡಿಗಳಷ್ಟು ಎತ್ತರದಲ್ಲಿ.

## ಪೌರಾಣಿಕ ಹಿನ್ನೆಲೆ:

೧) ಪಾಂಡವರು ಕುರುಕ್ಷೇತ್ರ ಯುದ್ಧದಲ್ಲಿ; ಗುರು, ಬಂಧು ಜನರನ್ನು ವಧಿಸಿದ ನಿಮಿತ್ತ ಪಾಪಪರಿಹಾರಾರ್ಥವಾಗಿ ಶಿವನನ್ನು ಕಂಡು ಪೂಜಿಸಬೇಕೆಂದು ವಾರಣಾಸಿಗೆ ಬಂದರು. ಇವರನ್ನು ಪರೀಕ್ಷಿಸಲು ಶಿವನು ಕಾಶಿಯನ್ನು ಬಿಟ್ಟು ಕೇದಾರಕ್ಕೆ ಹೋದನು. ಇದನ್ನರಿತ ಪಾಂಡವರು ಅಲ್ಲಿಗೂ ತೆರಳಿದರು. ಅಲ್ಲಿಯೂ ಶಿವನು ಅವರಿಗೆ ಕಾಣಲಿಲ್ಲ. ಆದರೆ; ಪಾಂಡವರು ಆತನ ಹುಡುಕಾಟವನ್ನು ಬಿಡಲೇ ಇಲ್ಲ.

ಇಂತಿರಲು ಒಂದು ದಿನ ಸಂಧ್ಯಾಸಮಯದಲ್ಲಿ ದನಗಳ ಹಿಂಡು ಅಡವಿಯಿಂದ ಬರುತ್ತಿದ್ದವು. ಆ ದನಗಳ ಹಿಂಡಿನಲ್ಲಿ ಬೃಹದಾಕಾರದ ಗೂಳಿ ಇರುವುದನ್ನು ಕಂಡು, ಭೀಮನು ಸಂಶಯಗೊಂಡು, ದನಗಳು ಬರುವ ಇಕ್ಕಟ್ಟಿನ ಮಾರ್ಗಮಧ್ಯದಲ್ಲಿ ಎಡಕೂ ಬಲಕೂ ತನ್ನ ಕಾಲುಗಳನ್ನು ಅತ್ತೊಂದು ಇತ್ತೊಂದು ಇಟ್ಟು ನಿಂತನು. ಆಗ ಎಲ್ಲ ದನಗಳೂ ನಿರಾಯಾಸವಾಗಿ ಭೀಮನ ಕಾಲು ಬುಡದಿಂದ ಹೊರಟು ಹೋದವು, ಆದರೆ; ಆ ಬೃಹದಾಕಾರದ ಗೂಳಿ ( ನಂದಿ ) ಭೀಮನ ತೊಡೆಗಳ ಮಧ್ಯದಲ್ಲಿ ಸಿಗಲು,

ಆತನು ಅದನ್ನು ಈತನೇ ಶಿವನಿರಬೇಕೆಂದು ಗ್ರಹಿಸಿ ಬಲವಾಗಿ ಹಿಡಿದನು. ಆದಾಗ್ಯೂ ಆ ಗೂಳಿ ನುಸುಳಿ ಹೋಗಲು ಉಪಕ್ರಮಿಸಿದಾಗ ಅದರ ಡುಬ್ಬದ ಭಾಗವನ್ನಷ್ಟೇ ಹಿಡಿಯಲು ಭೀಮನಿಗೆ ಸಾಧ್ಯವಾಯಿತು. ಆ ಹಿಂಬದಿಯ ಭಾಗವೇ ಕೇದಾರದಲ್ಲುಳಿದು ಕೇದಾರನಾಥನಾದ. ಮುಂದಿನ ಮುಖದ ಭಾಗವು ನೇಪಾಳಕ್ಕೆ ಹೋಯಿತಂತೆ. ಅದು ಅಲ್ಲಿ ಪಶುಪತಿನಾಥನಾದ. ಈಶ್ವರನು ಪಾಂಡವರ ಪ್ರೀತಿಗಾಗಿ ಮೆಚ್ಚಿ ಅವರಿಗೆ ದರ್ಶನ ಕೊಟ್ಟು ಅಲ್ಲಿಯೇ ಲಿಂಗರೂಪದಲ್ಲಿ ನೆಲೆ ನಿಂತನು. ಇಲ್ಲಿಯ ಈಶ್ವರ ಲಿಂಗವು ಪಶುವಿನ ಡುಬ್ಬದ ಶಂಖಾಕಾರದ ದುಬ್ಬದಂತಿದೆ. ಇದು ಕಟೆದು ಮಾಡಿದ ಲಿಂಗವಲ್ಲ. ಶಿವನು ಪಾಂಡವರಿಗೆ ಕಾಣದಂತೆ ಕಾಶಿಯಿಂದ ಕೇದಾರಕ್ಕೆ ಬಂದು ಇಲ್ಲಿಯೂ ಗುಪ್ತನಾದ ನಿಮಿತ್ತ ಈ ಕೇದಾರವನ್ನು ಗುಪ್ತಕಾಶಿ ಎಂದೂ ಕರೆಯುವರು,

೨. ಮತ್ತೊಂದು ಹಿನ್ನಲೆಯ ಪ್ರಕಾರ : ಹಿಂದಕ್ಕೆ ಧರ್ಮಜನೆಂಬ ಋಷಿಯ ಮಕ್ಕಳಾದ ನರ ಮತ್ತು ನಾರಾಯಣರು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡರು. "ನಿಮಗೇನು ಬೇಕು ?" ಎಂದು ಶಿವನು ಕೇಳಲು; "ನಮಗೆ ಏನೂ ಬೇಡ. ಹುಲುಮಾನವರು ನಿನ್ನನ್ನು ಪೂಜಿಸಿ ತಮ್ಮ ಪಾಪ ಪರಿಹರಿಸಿಕೊಳ್ಳಲು, ನೀನು ಇಲ್ಲಿ ಲಿಂಗರೂಪದಲ್ಲಿ ಬಂದು ನಿಲ್ಲಲೆಂಬ ಅಪೇಕ್ಷೆಯಿಂದ ನಾವು ತಪಸ್ಸು ಮಾಡಿದವು. ಆದ್ದರಿಂದ, ಅನಾದ್ಯಂತ ತೇಜೋಮಯ ಲಿಂಗರೂಪಿಯಾಗಿ ಇಲ್ಲಿ ನೆಲೆ ನಿಂತು ಮಾನವರನ್ನು ಉದ್ಧರಿಸಬೇಕೆಂಬುದೇ ನಮ್ಮ ಅಪೇಕ್ಷೆ" ಎಂದು ಭಿನ್ನವಿಸಿಕೊಂಡರು. ಅವರ ಇಚ್ಛೆಯಂತೆ ಶಿವನು ಈ ಸ್ಥಳದಲ್ಲಿ ನೆಲೆತಿಂತನು. ಇದುವೇ ಮಾನವೀತೆಯ ಒಳತಿಗಾಗಿ ಇಳಿದುಬಂದ ಶಿವಲಿಂಗ. (For the Good of Humanity) ನರ ಮತ್ತು ನಾರಾಯಣರೆಂಬ ಭಕ್ತರು ಭಕ್ತಿಗೆ ಮೆಚ್ಚಿ ಬಂದ ಈತನನ್ನು ನರ ನಾರಾಣನೆಂದು ಕರೆಯುವರು.

" ದೃಷ್ಟ್ವಾ ರೂಪಂ ನರಸ್ಯೈವ ತಥಾ ನಾರಾಯಣಸ್ಯ ಹಿ
ಕೇದಾರೇಶ್ವರ ಶಂಭೋಶ್ಚ ಮುಕ್ತ ಭಾಗೀನ ಸಂಶಯಃ"॥

(ಯಾರು ನಾರಾಯಣ ರೂಪಿಯಾದ ಭಗವಂತ ಕೇದಾರನಾಥನನ್ನು ಕಾಣುವರೋ, ಅವರು ಮುಕ್ತಿಗೆ ಭಾಗಿಯಾಗುವುದರಲ್ಲಿ ಸಂಶಯವಿಲ್ಲ.

೩. ಇದಲ್ಲದೆ ಇನ್ನೂ ಒಂದು ಚಿಕ್ಕ ಕಥೆಯುಂಟು : ಮೊದಲು ಶಿವನು ಬದರಿಯಲ್ಲಿದ್ದನು. ವಿಷ್ಣು ಅದಾವುದೋ ಕಾರಣದಿಂದ ಶಿವನನ್ನು ಅಲ್ಲಿಂದ ತಳಕಿತ್ತುವಂತೆ ಮಾಡಿದನಂತೆ. ಆಗ ಶಿವನು ಪಾರ್ವತಿಯೊಂದಿಗೆ ನೀಲಕಂಠ ಪರ್ವತ ಪ್ರದೇಶವನ್ನು ದಾಟಿ ಬಂದು ಮತ್ತೊಂದು ತುದಿಯಾದ ಕೇದಾರದಲ್ಲಿ ಬಂದು ನಿಂತನಂತೆ. ಮುಂದೆ ಇದುವೇ ಈಶ್ವರನ ಸ್ಥಾನ ಕೇದಾರವಾಯಿತಂತೆ. ಇಂತೆಂದು ತಿಳಿದು ಬರುವುದು.

ಬದರಿ ಕೇದಾರಗಳ ಅಂತರ ಕೇವಲ ೩೦ ಕಿ. ಮಿ. ಆದರೆ, ಯಾತ್ರಿಕರು ಕ್ರಮಿಸುವ ದಾರಿ ಸುಮಾರು ೨೪೦ ಕಿ. ಮಿ. ಏಕೆಂದರೆ, ಮೂವತ್ತು ಕಿ. ಮಿ. ದಾರಿಯೆಲ್ಲೆಲ್ಲ ಪರ್ವತಗಳೇ ಇದ್ದು ದಾರಿಯೂ ಲಭ್ಯವಿರುವುದಿಲ್ಲ. ದುರ್ಗಮ ಕಾನನಗಳ ಬೀಡು.

ಕೇದಾರನಾಥನ ಚಿಕ್ಕ ಗುಡಿಯೊಂದನ್ನು ಮೊದಲು ಆದಿಶಂಕರಾಚಾರ್ಯರು ಕಟ್ಟಿಸಿದರಂತೆ. ಮುಂದೆ ಕಾಲಾನುಕ್ರಮದಲ್ಲಿ ವಿಸ್ತಾರಗೊಂಡಿತಂತೆ. ಈಗ ಮಂದಿರವು ೨೦೦೦' × ೧೦೦೦' ವಿಸ್ತಾರವಾದ ಕಟ್ಟೆಯ ಮೇಲೆ ನಿಂತಿರುವುದು. ಈ ಮಂದಿರದ ಅನತಿ ದೂರದಲ್ಲಿ ಶಂಕರಾಚಾರ್ಯರ ಸಮಾಧಿ ಇದೆ. ಶಂಕರಾಚಾರ್ಯರು ಇಲ್ಲಿಯೇ ದೇಹ ಬಿಟ್ಟರೆಂದು ಹೇಳುವರು. ಅಲ್ಲೊಂದು ಚಿಕ್ಕಗುಡಿಯಿದ್ದು ಒಳಗಡೆ ಶಂಕರಾಚಾರ್ಯರ ಮೂರ್ತಿ.

ಮಂದಿರದ ಎತ್ತರವಾದ ಕಟ್ಟೆಯ ಮೇಲಿರುವ ಮಂದಿರವನ್ನು ೧೦೭೯ ರಲ್ಲಿ ಭೋಜರಾಜನು ಕಟ್ಟಿಸಿದನಂತೆ. ಅನಂತರ ೧೮೦೦ ರಲ್ಲಿ ಅಹಲ್ಯಾಬಾಯಿಯು ಇದರ ಜೀರ್ಣೋದ್ಧಾರ ಮಾಡಿಸಿದಳಂತೆ.

ಶ್ರೀ ಶಂಕರಾಚಾರ್ಯರು ಈ ಕೆಳಗಿನ ಶ್ಲೋಕಗಳಲ್ಲಿ ಶ್ರೀ ಕೇದಾರನಾಥನ ಸ್ತುತಿಯನ್ನು ಒಳ್ಳೇ ಭಾವ ಪೂರ್ಣವಾಗಿ ಮಾಡಿರುವರು.



"ಮಹಾದ್ರಿ ಪಾರ್ಶ್ವೇಚ ತಟೇ ರಮಂತಂ
ಸಪೂಜಲ ಮಾನಂ ಸತತಂ ಮುನೀಂದ್ರೈಃ
ಸುರಾಸುರೈರ್ಯಕ್ಷ ಮಹೋನಗಾದ್ಯೈಃ
ಕೇದಾರಮೀಶಂ ಶಿವ ಮೇರುಮೀಡೆ" ॥

( ರಮಣೀಯವಾದ ಮಹಾನ್ ಹಿಮಾಲಯ ತಟ ಪ್ರದೇಶದ ಒಡೆಯನಾದ-ವನು, ಋಷಿ ಮುನಿಗಳಿಂದ, ಸುರಾಸುರರಿಂದ ಮತ್ತು ಮಹಾನಾಗ ಇವರೆಲ್ಲರಿಂದಲೂ ಪೂಜೆಗೈಯಲ್ಪಟ್ಟ ಶ್ರೀ ಕೇದಾರೇಶ್ವರ ಮಹಾ ದೇವನಿಗೆ ನಾನು ನಮಸ್ಕರಿಸುತ್ತೇನೆ.)

"ಭೂದಾರ ತಾಮುದವದ್ಯಪೇಕ್ಷಯಾ ಶ್ರೀ
ಭೂದಾರ ಏವ ಕಿಮತಃ ಸುಮತೇಲಭಸ್ವ
ಕೇದಾರ ಮಾಕಲಿತ ಮುಕ್ತಿ ಮಹೌಷಧೀನಾಮ್
ಪಾದಾರವಿಂದ ಭಜನಂ ಪರಮೇಶ್ವರಸ್ಯ" ॥

ಆನಂದಲಹರಿ-

ಈ ಮಂದಿರದಲ್ಲಿ ಶಿವನ ಮೂರ್ತಿಯಾಗಲೀ, ಈಶ್ವರ ಲಿಂಗವಾಗಲೀ ಇರುವುದಿಲ್ಲ. ತ್ರಿಕೋನಾಕಾರದ ಶಿಲೆಯೊಂದುಂಟು. ಅದರ ಮೇಲ್ಬದಿಯ ದುಬ್ಬದ ಭಾಗವೇ ಈಶ್ವರ.

ಮಹೇಶ್ವರನ ಪಾರ್ಶ್ವಭಾಗದಿಂದ ದಿವ್ಯಜ್ಯೋತಿಯೊಂದು ಹೊರ ಬಂದು ಅಲ್ಲಿ ಶಿವನು ಪ್ರತ್ಯಕ್ಷನಾಗಿ ಪಾಂಡವರಿಗೆ ದರ್ಶನವಿತ್ತನಂತೆ. ಅನಂತರ ಶಿವನು; "ನಾನು ಇಲ್ಲಿ ತ್ರಿಕೋನಾಕಾರದ ಜ್ಯೋತಿರ್ಲಿಂಗವಾಗಿದ್ದು ಇಲ್ಲಿಯೇ ನಿಲ್ಲುವೆ. ಈ ಕೇದಾರನಾಥನ ದರ್ಶನದಿಂದ ಪಾವನ ಹೊಂದಿರಿ." ಎಂದು ಹೇಳಿ ಗುಪ್ತನಾದನಂತೆ,

ವೃಷಭ ರೂಪದ ಶಂಕರನಿಗೆ ಭೀಮನು ಗದೆಯಿಂದ ಪ್ರಹಾರ ಮಾಡಿದ್ದರಿಂದ ಭೀಮನಿಗೆ ಪಶ್ಚಾತಾಪವಾಗಿ ಆ ಪಶುವಿನ ಪೃಷ್ಠಭಾಗಕ್ಕೆ ತುಪ್ಪವನ್ನು ಹಚ್ಚಿ ತಿಕ್ಕಿದನಂತೆ. ಇದನ್ನರಿತ ಭಕ್ತವೃಂದವು ಈಗಲೂ ತ್ರಿಕೋನಾಕಾರದ ಕೇದಾರನಾಥನಿಗೆ ತುಪ್ಪವನ್ನು ಎರೆಯುವರು. ಇದೊಂದು ಕೇದಾರನಾಥನಿಗೆ ಮಹಾಪೂಜೆ ಎಂದೆನಿಸಿದೆ. ಇಲ್ಲಿ ಜಲಾಭಿಷೇಕವಿಲ್ಲ. ಬಿಲ್ವಾರ್ಚನೆ ಇಲ್ಲ. ಪುಷ್ಪಾರ್ಚನೆಯೂ ಇರದು.

ಪಾಂಡವರ ಸ್ವರ್ಗಾರೋಹಣವೂ ಇದೇ ಸ್ಥಳದಲ್ಲಿ ಜರುಗಿತಂತೆ. ಅದಕ್ಕೆ ಈ ಉನ್ನತ ಶಿಖರಕ್ಕೆ ಸ್ವರ್ಗಾರೋಹಣವೆಂದು ಹೆಸರು. ಧರ್ಮರಾಜನು ಸ್ವರ್ಗವನ್ನು ಏರುವಾಗ ಆತನ ಬೆರಳುಂಗುರವೊಂದು ಕೆಳಗೆ ಬಿದ್ದುದರಿಂದ ಅಲ್ಲೊಂದು ಉಂಗುಷ್ಟದಳತೆಯ ಶಿವಲಿಂಗವನ್ನು ಸ್ಥಾಪಿಸಿರುವರು.

ಕೇದಾರದಲ್ಲಿ ಕಾರ್ತಿಕ ಮಾಸದಿಂದ ಹಿಮವೃಷ್ಟಿ ಪ್ರಾರಂಭವಾಗಿ ಕೂಡಲೆ ತುಪ್ಪದ ನಂದಾದೀಪವನ್ನು ಹಚ್ಚಿಟ್ಟು, ಕೇದಾರೇಶ್ವರನ ಭೋಗ ಸಿಂಹಾಸನವನ್ನು ಹೊರಗಿಟ್ಟು ಮಂದಿರದ ಬಾಗಿಲವನ್ನು ಮುಚ್ಚಿ ಬಿಡುವರು; ಮುಂದೆ ಆರು ತಿಂಗಳ ಪರಿಯಂತವೂ ಕೇದಾರನಾಥನ ಸ್ಥಳವು ನಿರ್ಜನ ವಾಗುವುದು. ಆ ಸಮಯದಲ್ಲಿ ಪೂಜಾರಿಗಳೂ ಮತ್ತು ಇತರರೂ ಊಖಿಮಠವೆಂಬ ಸ್ಥಳದಲ್ಲಿ ಬಂದು ವಾಸಿಸುವರು. ಇದಕ್ಕೆ ಕೇದಾರದಲ್ಲಿಯ ಹಿಮಪಾತವೇ ಕಾರಣ. ಚಳಿಗಾಲದಲ್ಲಿ ಚಳಿ, ಹಿಮವರ್ಷ.

ವೈಶಾಖ ಮಾಸದಲ್ಲಿ ಹಿಮವೃಷ್ಟಿ ನಿಲ್ಲಲು ಪುನಃ ಕೇದಾರನಾಥನ ಮಂದಿರವು ತೆರೆಯುವುದು. ಆಗ, ಆಶ್ಚರ್ಯವೆಂಬಂತೆ: ಮಂದಿರದ ದ್ವಾರವು ಕಾರ್ತಿಕ ಮಾಸದಲ್ಲಿ ಮುಚ್ಚುವ ಸಮಯದಲ್ಲಿ ಗರ್ಭಗುಡಿಯಲ್ಲಿ ಹಚ್ಚಿಟ್ಟ ತುಪ್ಪದ ನಂದಾ ದೀಪವು ಯಥಾವತ್ತಾಗಿ ಉರಿಯುತ್ತಿರುವುದನ್ನು ಕಾಣ ಬಹುದು ? ಇದೊಂದು ಭಗವಂತನ ಮಹಿಮೆಯಲ್ಲವೆ ? ಈ ಅಚ್ಚರಿಯ ನಂದಾದೀಪವನ್ನು ನೋಡಿದ ಅಂದಿನ ಭಕ್ತರು ಕೃತಾರ್ಥರಾದೆವೆಂದು ಭಾವಿಸುವರು. ಇಲ್ಲಿ ಈಶ್ವರನ ದರ್ಶನ ವರುಷದಲ್ಲಿ ಆರು ತಿಂಗಳು ಮಾತ್ರ. ವೈಶಾಖ ಶುದ್ಧ ತ್ರಿತಿಯಾ ( ಅಕ್ಷಯ ತ್ರಿತಿಯಾ) ದ ಎಡಬಲ (ಮೇ ತಿಂಗಳ) ಯಾತ್ರಿಕರಿಗಾಗಿ ಮುಕ್ತ. ಕಾರ್ತಿಕ ಶುದ್ಧ ಪ್ರತಿಪದೆಯ ಎಡಬಲ (ಅಕ್ಟೋಬರ ತಿಂಗಳ) ಮತ್ತೆ ಮುಚ್ಚುವುದು.

ಹನ್ನೆರಡರಲ್ಲಿ ಹನ್ನೊಂದು ಜ್ಯೋತಿರ್ಲಿಂಗಗಳನ್ನು ಸಂದರ್ಶಿಸಿ ಬರುವುದು ಬಹುಸುಲಭ ಈಗಂತೂ ಸುಗಮ ದಾರಿಗಳಿವೆ. ಮಂದಿರದ ಬಾಗಿಲವರೆಗೂ ವಾಹನಗಳು ತಲುಪುವವು. ಕೈಯಲ್ಲಿ ಕಾಸಿದ್ದರೆ ಸಾಕು. ಆದರೆ; ಈ ಹನ್ನೊಂದನೆಯ ಕೇದಾರನಾಥ ಜ್ಯೋತಿರ್ಲಿಂಗವನ್ನು ನೋಡ ಬೇಕೆಂದರೆ, ಹಣದ ಅನುಕೂಲತೆಯೊಂದೇ ಸಾಲದು. ಧೈರ್ಯ, ಸಾಹಸ, ಮನೋಬಲ, ತಾಳ್ಮೆಗಳೂಬೇಕು. ಈ ಕ್ಷೇತ್ರವನ್ನು ತಲುಪಲು ಅಲ್ಲಿಯ ವರೆಗಿನ ದಾರಿಗೆ ವಾಹನ ಸೌಕರ್ಯಗಳಿಲ್ಲ. ಹಿಮಾಲಯದ ಉತ್ತುಂಗ ಶಿಖರ ದಲ್ಲಿರುವುದೇ ಮೂಲ ಕಾರಣ. ಅಲ್ಲಿ ಗೌರಿಕುಂಡವೆಂಬುದೊಂದು ಚಿಕ್ಕ ಗ್ರಾಮ;

ಅಲ್ಲಿಯವರೆಗೂ ವಾಹನಗಳು ಓಡಾಡುತ್ತವೆ. ಮುಂದೆ ಅಲ್ಲಿಂದ ಕೇದಾರದ ವರೆಗೆ ೧೪ ಕಿ. ಮಿ. ದಾರಿಯನ್ನು ಕಾಲು ನಡಿಗೆಯಿಂದ ಅಥವಾ ಕುದುರೆ, ಮೇಣೆಗಳ ಮೂಲಕ ಕ್ರಮಿಸುವುದು ಅನಿವಾರ್ಯ. ಕಾಲು ದಾರಿಯು ಬಹಳೇ ಇಕ್ಕಟ್ಟು. ಅಂಕುಡೊಂಕು. ಎಡಬಲಗಳಲ್ಲಿ ಗಿರಿ–ಕಂದರಗಳು ನಡೆದು ಹೋಗುವವರಿಗೆ ಮಂದಾಕಿನಿಯು ಮಾರ್ಗದರ್ಶಕಳಿದ್ದರೂ ಜೈ–ಕೇದಾರನಾಥ ಎಂಬ ಜೈಕಾರವೇ ಮದ್ದು.

ಋಷಿಕೇಶದಿಂದ ಈ ಯಾತ್ರೆಯನ್ನು ಪ್ರಾರಂಭಿಸಬೇಕು. ಗೌರಿ–ಕುಂಡದವರೆಗಿನ ಸುಮಾರು ೨೦೯ ಕಿ. ಮಿ. ಮಾರ್ಗವನ್ನು ಬಸ್ಸಿನಿಂದಾಗಲೀ, ಖಾಸಗೀ ವಾಹನದಿಂದಾಗಲೀ ಕ್ರಮಿಸಬಹುದು. ೧೨ ತಾಸುಗಳಾದರೂ ಬೇಕು. ಬೆಳಗಿನಲ್ಲಿ ಋಷಿಕೇಶವನ್ನು ಬಿಟ್ಟರೆ ಸಾಯಂಕಾಲ ಗೌರಿಕುಂಡವನ್ನು ತಲುಪಬಹುದು. ಈ ಇಕ್ಕಟ್ಟಿನ ದಾರಿಯುದ್ದಕ್ಕೂ ವಾಹನ ಸಾಗುವಾಗ ಏನೋ ಒಂದು ತರಹದ ಭಯ. ಅಲ್ಲಿಯ ರುದ್ರರಮಣೀಯ ನೋಟ ಸಂತೋಷವನ್ನು ತಂದು ಭಯವನ್ನು ಓಡಿಸುತ್ತದೆ. ಅಲ್ಲಿಯ ವಾಹನ ಚಾಲಕನ ಚಾಕಚಕ್ಯತೆ, ಧೈರ್ಯ ಮೆಚ್ಚುವಂತಹವು. ಮಾರ್ಗ ಮಧ್ಯದಲ್ಲಿ ಎಲ್ಲಿಯೋ ಕತ್ತಲಾದರೂ ಅಲ್ಲಿಯ ಸಮೀಪದ ಗ್ರಾಮದಲ್ಲಿ ವಸತಿ ಮಾಡಲೇ–ಬೇಕು. ಈ ಮಾರ್ಗಮಧ್ಯದಲ್ಲಿ ರಾತ್ರಿಯ ಪ್ರಯಾಣ ನಿಷಿದ್ಧ. ಈ ಮಾರ್ಗ ಮಧ್ಯದಲ್ಲಿ ಹಳ್ಳಿಗಳು ಚಿಕ್ಕವಿದ್ದರೂ ನಿತ್ಯೋಪಯೋಗಿ ಸಾಮಾನುಗಳು ಅಂತಹ ಅಟ್ಟುಂಬಟ್ಟ ಅರಣದಲ್ಲಿಯೂ ಲಭ್ಯ.

ಈ ಮಾರ್ಗಮಧ್ಯದಲ್ಲಿ ಸಿಗುವ ಸ್ಥಳಗಳ ಪರಿಚಯವು ಸೂಕ್ತ ಹಾಗೂ ಉಪಯುಕ್ತವೆಂಬ ಕಾರಣದಿಂದ ಸೂಚಿಸಲಾಗಿದೆ.

## ೧) ಸೋನೆ ಪ್ರಯಾಗ :

ಹೃಷಿಕೇಶದಿಂದ ಹೊರಟರೆ ಮೊದಲು ಸಿಗುವುದು ಸೋನೆ ಪ್ರಯಾಗ. ಇದೊಂದು ಚಿಕ್ಕ ಹಳ್ಳಿ. ಯಾತ್ರಿಕರಿಗಾಗಿಯೇ ನಿರ್ಮಾಣವಾದಂತಿದೆ. ಚಿಕ್ಕ ಚಿಕ್ಕ ಗುಡಿಸಲುಗಳೇ ಧರ್ಮಶಾಲೆ. ವಸತಿಗೆ, ಹಾಸಲು, ಹೊದಿಯಲು

ಅನುಕೂಲ ಮಾಡಿಕೊಡುವರು. ಒಂದು ರಜಿಯನ್ನು ಒಂದು ದಿನದ ಉಪ-ಯೋಗಕ್ಕಾಗಿ ಒಂದೆರಡು ರೂಪಾಯಿಗಳ ಬಾಡಿಗೆ. ಅದೇನು ಹೆಚ್ಚಲ್ಲ. ಅಂತಹ ಪರ್ವತದ ಮೈಕೊರೆಯುವ ಚಳಿಯಲ್ಲಿಯೂ ಅಷ್ಟು ಸುಲಭದ ಬೆಲೆಗೆ ಬಾಡಿಗೆ ಸಿಗುವುದೂ ಒಂದು ಪುಣ್ಯ. ಯಾತ್ರಿಕರನ್ನು ಶೋಷಣೆ ಮಾಡಬೇಕೆಂಬ ಮನೋಭಾವ ಅಲ್ಲಿಯ ಜನರಲ್ಲಿಲ್ಲ. ಅವರು ಯಾತ್ರಿಕರ ಸೇವೆಯಂದೇ ತಿಳಿಯುವರು.

## ೨) ಗೌರೀಕುಂಡ :

ತದನಂತರ ಸಿಗುವುದು ಗೌರೀಕುಂಡ. ಇದೂ ಒಂದು ಚಿಕ್ಕ ಗ್ರಾಮವೆ. ವಾಹನಗಳು ಇಲ್ಲಿಯವರೆಗೂ ಬರುವವು. ಇಲ್ಲೊಂದು ಬಿಸಿನೀರಿನ ಕುಂಡ, ಮಗ್ಗುಲದಲ್ಲಿಯೇ ಬರ್ಫಸದೃಶ್ಯ ಶೀತಲ ಮಂದಾಕಿನಿ ಭೋರ್ಗರೆಯುವಳು. ಕುಂಡದಲ್ಲಿ ಮಾತ್ರ ಅತಿ ಬಿಸಿಯಾದ ನೀರು. ಗುಪ್ತವಾಗಿ ಕುಂಡಕ್ಕೆ ನೀರು ಹರಿದು ಬರುತ್ತದೆ. ಈ ಕುಂಡವನ್ನು ಅಮೃತಕುಂಡವೆಂದೂ ಕರೆಯುವರು. ಅಸಂಖ್ಯ ಯಾತ್ರಿಕರು ದಿನಂಪ್ರತಿ ಇಲ್ಲಿ ಮುಳುಗುಹಾಕಿದರೂ ನೀರು ಸ್ವಚ್ಛವಾಗಿಯೇ ಇರುತ್ತದೆ. ಗೌರೀಕುಂಡ ಯಾತ್ರಿಕರಿಗೆ ವಿಶ್ರಾಮ ಸ್ಥಳ. ಊಟ, ವಸತಿ, ತಿಂಡಿ ತಿನಸುಗಳು ಲಭ್ಯ. ಆದರೂ ಅಲ್ಲಿಯದು ಊಟವಲ್ಲ ಬದುಕಿಗಾಗಿ ಊಟ.

ಗೌರೀಕುಂಡದಿಂದ ೧೪ ( ಹದಿನಾಲ್ಕು )ಕಿ. ಮಿ. ದಾರಿಯನ್ನು ಕಾಲು ನಡುಗೆಯಿಂದ ಸಾಗುವಾಗ ಅಲ್ಲಿ ಸಿಗುವ ಸ್ಥಳಗಳೆಂದರೆ–

## ೧) ರಾಮ ಬರುವಾ :

ಗೌರೀಕುಂಡದಿಂದ ಈ ಸ್ಥಳವು ಏಳು ಕಿ. ಮಿ. ದೂರದಲ್ಲಿದೆ. ದಾರಿ ದುರ್ಗಮ. ಅಲ್ಲಲ್ಲಿ ನೀರಿನ ಪ್ರವಾಹಗಳು. ಒಂದೆಡೆ ಉತ್ತುಂಗ ಶಿಖರ. ಇನ್ನೊಂದೆಡೆ ಪಾತಾಳವನ್ನೇ ನೆನಪಿಸಿಕೊಳ್ಳುವ ಕೊಳ್ಳ. ಬಂಡೆಗಲ್ಲುಗಳು ಯಾವಾಗ ಕಳಚಿಬೀಳುವವೋ ಎಂಬ ಹೆದರಿಕೆ. ಆದರೂ; 'ಜೈ ಕೇದಾರನಾಥ'

ಎಂದು ಜೈಜೈಕಾರ ಮಾಡುತ್ತ ಹೋದರೆ ದಾರಿಯ ದಣಿವು, ಭಯ ಕಡಿಮೆ ಯಾಗುವುದರಲ್ಲಿ ಸಂಶಯವಿಲ್ಲ. ರಾಮಬಾಡಾವನ್ನು ತಲುಪುವುದರಲ್ಲಿ ಯಾತ್ರಿಕರು ದಣಿದಿದ್ದರೆ ಅಲ್ಲಿ ವಸತಿ ಹಾಕುವುದು ಒಳಿತು. ಅಲ್ಲಿ ಚಿಕ್ಕಚಿಕ್ಕ ಮನೆ ಹಾಗೂ ಗುಡಿಸಲಗಳೂ ಲಭ್ಯ. ಅಲ್ಲಿಯ ಜನರುಕಗ್ಗಾಗಿ ಕಂಡರೂ ತುಂಬಾ ಪ್ರಾಮಾಣಿಕರು. ಕಳ್ಳಕಾಕತನವನ್ನು ಅರಿಯರು. ಪ್ರಾಮಾಣಿಕ ತನವೇ ಅವರ ವೃತ್ತಿ ಏನೋ ಅನ್ನುವ ಅವರ ನಡೆನುಡಿ.

## ೨) ಗರೂರ ಚಟ್ಟಿ :

ರಾಮ ಬಾಡಾದಿಂದ ನಾಲ್ಕು ಕಿ. ಮೀ. ಅಂತರದಲ್ಲಿ ಗರೂರ ಚಟ್ಟಿ ಎಂಬ ಹಳ್ಳಿಯೊಂದು ಸಿಕ್ಕುವುದು. ಅಲ್ಲಿ ಸ್ವಲ್ಪ ತಂಗಿ, ದಣಿವಾರಿಸಿಕೊಳ್ಳ ಬಹುದು. ಸಾಮಾನ್ಯ ತಿಂಡಿ ಪೇಯಗಳೂ ಲಭ್ಯ. ದಣಿವಾರಿಸಿಕೊಂಡು ಹಾಗೆಯೇ ಮುಂದುವರಿದರೆ ಮೂರೇ ಮೂರು ಕಿ. ಮೀ.ದಲ್ಲಿ ಕೇದಾರ. ಗರೂರಚಟ್ಟಿಯಿಂದ ಕೇದಾರದ ದಾರಿ ಅಷ್ಟು ಕಡಿದಾಗಿರುವುದಿಲ್ಲ. ಆದರೆ ; ಎರಡು ಸಾವಿರದಡಿ ಎತ್ತರಕ್ಕೇರಬೇಕು. ಅಲ್ಲಿ ನಿಸರ್ಗವೂ ಬಹು ಬದಲು: ದಟ್ಟ ಅರಣ್ಯ ಹಿಂದುಳಿಯುವುದು. ಮುಂದುಗಡೆಯಲ್ಲಿ ಹಿಮಾಚ್ಛಾದಿತ ಶಿಖರಗಳನ್ನು ಕಂಡಾಗ ಹೃದಯ ಅರಳುತ್ತದೆ. ಮನಸ್ಸು ಗರಿಗೆದರಿ ಹಾರು ತ್ತದೆ. ವಿಶಾಲವಾದ ಕೊಳ್ಳ ಎದ್ದು ಕಾಣುತ್ತದೆ. ಅಲ್ಲಿ ನಮ್ಮ ಸಂಗಾತಿ ಮಂದಾಕಿನಿ. ಅವಳೇ ನಮಗೆ ಕೇದಾರವನ್ನು ತಲುಪಿಸಲು ಮಾರ್ಗದರ್ಶಿನಿ, ಹರ್ಷದಾಯಿನಿ.

ಕೇದಾರದಲ್ಲಿ ಯಾವಾಗಲೂ ಹಿಮಾಚ್ಛಾದಿತ. ಹೆಪ್ಪುಗಟ್ಟುವ ಚಳಿ. ಹೀಗಾಗಿ ಅಲ್ಲಿಯ ಪೂಜಾರಿಗಳಾಗಲೀ, ಯಾತ್ರಿಕರಾಗಲೀ, ಬಟ್ಟೆಬರೆಗಳಷ್ಟೇ ಯಲ್ಲ, ಪಾದತ್ರಾಣಗಳನ್ನೂ ಮೆಟ್ಟಿಕೊಂಡು ಪೂಜಾವಿಧಿಯನ್ನು ನೆರವೇರಿಸು ವರು. ಇಲ್ಲಿ ಅದು, ಹವಾಮಾನದ ಗುಣಧರ್ಮದ ಅನಿವಾರ್ಯತೆ ಪಂಡಾಗಳ ಹಾವಳಿ ಉಂಟು. ಯಾತ್ರಿಕರ ದಟ್ಟಣೆಯಿಂದಾಗಿ ಪಂಡಾಗಳ ಕೆಲಸವೂ ಅವಸರ–ಅವಸರ.

ಇಲ್ಲಿ ಪಂಚ–ಕೇದಾರಗಳೆಂದಿರುವವು.

೧) ಕೇದಾರನಾಥ

ಇದುವೇ ಮುಖ್ಯ ಕೇದಾರನಾಥ. ಇಲ್ಲಿ ಬಂಡೆಗಲ್ಲಿನಲ್ಲಿ ಒಡಮೂಡಿದ ಲಿಂಗ. ಈತನನ್ನು ಜ್ಯೋತಿರ್ಲಿಂಗನೆಂದು ಕರೆಯುವರು.

೨) ಮಧ್ಯಮಹೇಶ್ವರ :

ಇದು ನಾಲಾಚಟ್ಟಿಯಿಂದ ಸುಮಾರು ೨೫ ಕಿ.ಮಿ. ಹಾಗೂ ಊಖಿಮಠದಿಂದ ೧೨ ಕಿ. ಮೀ. ಅಂತರದಲ್ಲಿದೆ. ಇಲ್ಲಿ ಗೂಳಿಯ ನಾಭಿಯಲ್ಲಿ ಲಿಂಗರೂಪ.

೩) ತುಂಗನಾಥ :

ಇದು ಜೋಷ್ಠಾದಿಂದ ೫ ಕಿ. ಮಿ. ಹಾಗೂ ಊಖಿಮಠದಿಂದ ೩೨ ಕಿ.ಮಿ. ದೂರದಲ್ಲಿದೆ. ಇಲ್ಲಿ ಗೂಳಿಯು ನಾಭಿಯಲ್ಲಿ ಲಿಂಗರೂಪ.

೪) ರುದ್ರನಾಥ :

ಇದು ಮಾಲಚಟ್ಟಿಯಿಂದ ಸುಮಾರು ೨೦ ಕಿ. ಮಿ. ದೂರ. ಇಲ್ಲಿ ಗೂಳಿಯು ಮುಖದಲ್ಲಿ ಲಿಂಗೋದ್ಭವ.

೫) ಕಲ್ಪೇಶ್ವರ :

ಈ ಸ್ಥಳವು ೯ ಕಿ. ಮಿ. ದೂರವಿರುವ ಹೆಲಂಗ ಚಟ್ಟಿಯು ವಿರುದ್ಧ ದಿಕ್ಕಿಗೆ ಇದ್ದು ಮತ್ತೊಂದು ಬದಿಯಲ್ಲಿ ಅಲಕನಂದಾ ನದಿ ಹರಿಯುವುದು. ಇಲ್ಲಿ ಗೂಳಿಯು ಜಡೆಯಲ್ಲಿ ಶಿವಲಿಂಗರೂಪ.

ಕೇದಾರದಿಂದ ಕೆಲವು ಪವಿತ್ರ ಕ್ಷೇತ್ರಗಳ ( ಉತ್ತರ ಖಂಡದ ) ಅಂತರ ಈ ತೆರನಾಗಿರುವುದು.

೧) ಹೃಷಿಕೇಶ : ೧೪ ಕಿ.ಮಿ. ಕಾಲುದಾರಿ.
೨೨೯ ಕಿ.ಮಿ. ಬಸ್ಸುದಾರಿ.

೨) ಬದರಿ : ೧೪ ಕಿ.ಮಿ. ಕಾಲುದಾರಿ.
೨೨೯ ಕಿ.ಮಿ. ಬಸ್ಸುದಾರಿ.

೩) ಗಂಗೋತ್ರಿ : ೧೪ ಕಿ.ಮಿ. ಕಾಲುದಾರಿ.
೨೨೯ ಕಿ.ಮಿ. ಬಸ್ಸುದಾರಿ.

೪) ಹರಿದ್ವಾರ : ೧೪ ಕಿ.ಮಿ. ಕಾಲುದಾರಿ.
೨೩೩ ಕಿ.ಮಿ. ಬಸ್ಸುದಾರಿ.

ಪದ್ಯದಲ್ಲಿ ಶ್ರೀ ಕೇದಾರನಾಥನನ್ನು ಕಾಣಿಸಿರುವೆ.

## ಶ್ರೀ ಕೇದಾರನಾಥ

ಇಲ್ಲಿ ಮಂದಿರದಲ್ಲಿ ಲಿಂಗವು ಇರದು ಮೂರುತಿ ಶಿವನದು
ಕಲ್ಲಿನಲ್ಲಿಯೆ ಮೂಡಿ ಬಂದಿಹ ಮೂರು ಭುಜಗಳದಾಕೃತಿ ॥೧॥

ಡುಬ್ಬದಾಕಾರದಲಿ ಕಾಣುವ ಶಿವನ ಲಿಂಗವೆ ಭಾವಿಸಿ
ಹಬ್ಬಿ ಬಿಟ್ಟಿತು ಭಕ್ತ ಮನದಲಿ ಲಿಂಗವೀಶ್ವರವೆನ್ನಿಸಿ ॥೨॥

ಹಿಮದ ಬಂಡೆಯ ಮೇರು ಪರ್ವತ ರುದ್ರ ನೋಟದ ಘಟ್ಟದಿ
ಹೆಮ್ಮೆ ಪಡುತಲಿ ನಿಂತು ರಕ್ಷಿಪ ಲಿಂಗರೂಪದಿ ಬೆಟ್ಟದಿ ॥೩॥

ಪಾಂಡು ತನಯರು ಬಂದು ನಿಂದರು ಶಿವನ ಕಾಣಲು ಮುಕ್ತಿಗೆ
ದಂಡು ದನಗಳ ಮಧ್ಯದಲ್ಲಿಯೆ ಭೀಮಹಿಡಿದನು ಗೂಳಿಯ ॥೪॥

ಕೈಯು ಜಾರಲು ಗೂಳಿಯೋಡಲು ಡುಬ್ಬ ಹಿಡಿದನು ಬಲ್ಲವ
ಗಾಯವಾಯಿತು ಗೂಳಿ ಡುಬ್ಬಕೆ ಭೀಮಬಲಯುತ ಶಕ್ತಿಗೆ ॥೫॥

ಶಿವನ ರೂಪದ ಗೂಳಿ ಡುಬ್ಬವು ಲಭಿಸಿ ಬಿಟ್ಟಿತು ಭೀಮಗೆ
ಶಿವನ ರೂಪದ ಗೂಳಿ ಮೋತಿಯು ಜಾರಿ ಹೋಯಿತು ಬೇರೆಡೆ ॥೬॥

ನರ ನಾರಾಯಣ ರೂಪವ ಧರಿಸಿದ
ಕೇದಾರೇಶ್ವರ ದರ್ಶನ ಮಾಳ್ಪಗೆ
ದ್ವಾರವು ಮುಕ್ತಿಯು ಸನಿಹದಿ ಕಾಂಬುದು
ಆದರದಿಂದಲಿ ನಮಿಸುವ ಭಕ್ತಗೆ ॥೭॥



# ೧೨. ಶ್ರೀ ಘೃಷ್ಣೇಶ್ವರ

ಭಗವಾನ್ ಶಂಕರನ ಜ್ಯೋತಿರ್ಲಿಂಗಗಳ ಯಾತ್ರೆಯನ್ನು ಮಾಡಿದ ನಂತರ ಈ ಜ್ಯೋತಿರ್ಲಿಂಗದ ದರ್ಶನ ಪಡೆಯದಿದ್ದರೆ ಯಾತ್ರೆಯು ಸಫಲವಾದಂತಲ್ಲವೆಂದು ಒಂದು ತಿಳುವಳಿಕೆ. ಹನ್ನೆರಡನೆಯ ಜ್ಯೋತಿರ್ಲಿಂಗದ ವೈಶಿಷ್ಠ್ಯವೇ ಇದು.

ಮಹಾರಾಷ್ಟ್ರದ ಔರಂಗಾಬಾದನಗರದ ದಕ್ಷಿಣ ದಿಕ್ಕಿಗೆ ಸುಮಾರು ೩೦ ಕಿ. ಮಿ. ದೂರದಲ್ಲಿ 'ವೇಳೂರ' ಎಂಬ ಗ್ರಾಮದ ಸನಿಹದಲ್ಲಿ ಶಿವಾಲಯವೆಂಬ ಪವಿತ್ರಸ್ಥಳವಂದುಂಟು. ಇಲ್ಲಿಯೇ ಘೃಷ್ಣೇಶ್ವರ ಜ್ಯೋತಿರ್ಲಿಂಗವಿರುವದು.

### ಪೌರಾಣಿಕ ಹಿನ್ನೆಲೆ :

ಈ ಈಶ್ವರಲಿಂಗ ಕುರಿತು ಅನೇಕ ದಂತಕಥೆಗಳೂ, ಸ್ಥಳ ಪುರಾಣಗಳೂ ಇವೆ. ಅವುಗಳನ್ನಿಲ್ಲಿ ಸ್ಥೂಲವಾಗಿ ಪರಿಚಯಿಸಿಕೊಳ್ಳೋಣ.

೧) ಪೂರ್ವಕಾಲದಲ್ಲಿ ಈ ಭಾಗದಲ್ಲಿ ನಾಗಾ ಎಂಬ ಆದಿವಾಸಿ ಜನಾಂಗ ವಾಸವಾಗಿದ್ದಿತು. ನಾರಗ ಸ್ಥಳವೆಂದರೆ 'ವಾರುಳ'. ಅದೇ ಬರಬರುತ 'ವೇರುಳ'ವೆಂದು ಈ ಗ್ರಾಮಕ್ಕೆ ಹೆಸರು ಬಂದಿರಲು ಸಾಕು. ಈ ಭಾಗದಲ್ಲಿ 'ಏಲಗಂಗಾ' ಎಂಬ ನದಿಯೊಂದುಂಟು. ಈ ಗ್ರಾಮವು ಈ ನದಿಯ ದಡದಲ್ಲಿದ್ದ ಪ್ರಯುಕ್ತ 'ಏಲೂರು' ಎಂಬ ಹೆಸರು ಬಂದಿರಬಹುದು. ಮತ್ತು ಈ ಭಾಗದಲ್ಲಿ ಮೊದಲು 'ಏಲಾ' ಎಂಬ ಹೆಸರಿನ ರಾಜನೊಬ್ಬನಿದ್ದನಂತೆ ಆ ರಾಜನ ರಾಜಧಾನಿ 'ಏಲಾಪುರ' ಇಲ್ಲವೆ 'ಏಲೂರು' ಅಥವ. ವೇಳೂರು.

ಒಂದು ಸಲ ಈ ಏಲು ರಾಜನು ಬೇಟೆಯಾಡುತ್ತ ಅರಣ್ಯ ಮಧ್ಯದಲ್ಲಿದ್ದ ಋಷಿಗಳ ಆಶ್ರಮದ ಪರಿಸರದಲ್ಲಿ ಪ್ರಾಣಿಗಳ ಹತ್ಯೆ ಮಾಡಲು, ಆ ಋಷಿಗಳು ಶಾಪವಿತ್ತರಂತೆ. ಆ ಶಾಪದಿಂದ ರಾಜನ ಮೈತುಂಬ ಕ್ರಿಮಿಗಳು ಹುಟ್ಟಿದ ವಂತೆ. ಹೀಗೆಯೇ ಆತನು ಬಾಯಾರಿಕೆಯಿಂದ ಅರಣ್ಯದಲ್ಲೆಲ್ಲ ಅಲೆದಾಡಿದರೂ ನೀರುಸಿಕ್ಕಲಿಲ್ಲವಂತೆ. ಕೊನೆಗೆ ಒಂದು ಆಕಳ ಖುರದಿಂದ ಬರುತ್ತಿರುವ ದ್ರವವನ್ನು ಕಂಡು ಬಾಯಲ್ಲಿ ಹಾಕಿಕೊಂಡನಂತೆ. ಆಗ ಆತನ ಮೈಮೇಲಿದ್ದ ಕೀಡೆಗಳೆಲ್ಲವೂ ಮಾಯವಾದವಂತೆ, ಇದನ್ನು ಕಂಡು ಆಶ್ಚರ್ಯಗೊಂಡು ರಾಜನು ಆ ಸ್ಥಳದಲ್ಲಿ ಕೂತು ತಪಸ್ಸು ಮಾಡಲು; ಬ್ರಹ್ಮದೇವನು ಪ್ರಸನ್ನ ನಾಗಿ. ಪ್ರಕಟನಾಗಿ ಅಷ್ಟ ತೀರ್ಥಗಳನ್ನು ತಂದು ಅಲ್ಲಿಯೇ ಸರೋವರ ನಿರ್ಮಿಸಿದನಂತೆ. ತದನಂತರ ಈ ಬ್ರಹ್ಮಸರೋವರವೇ ಶಿವಾಲಯ ವಾಯಿತಂತೆ. ಆ ಬಳಿಕ ಆ ಏಳಾ ಸ್ಥಳವು ಕ್ರಿಮಿನಾಶಕವೂ, ಪುಣ್ಯದಾಯಕವೂ ಎನಿಸಿತು.

೨) ಈ ಶಿವಾಲಯದ ಬಗ್ಗೆ ಮತ್ತೊಂದು ಆಖ್ಯಾಯಿಕೆಯೂ ಉಂಟು. ಕೈಲಾಸದಲ್ಲಿ ಒಮ್ಮೆ ಶಿವ-ಪಾರ್ವತಿಯರು ಲೆತ್ತವಾಡುತ್ತ ಕುಳಿತಾಗ, ಪಾರ್ವತಿಯು ಆಟವನ್ನು ಗೆದ್ದಳಂತೆ. ಇದರಿಂದ ಶಿವನಿಗೆ ಸಿಟ್ಟು ಬಂದು ದಕ್ಷಿಣದ ಸಹ್ಯಾದ್ರಿ ಪರ್ವತ ಭಾಗದ ತಂಪು ಹವೆಯ ಸ್ಥಳದಲ್ಲಿ ಬಂದು ಕುಳಿತನಂತೆ. ಆ ಸ್ಥಳಕ್ಕೆ 'ಮಹೇಶ ಮಾಳಿ' 'ಮೈಸ ಮಾಳಿ' ಎಂದು ಹೆಸರು ಬಿದ್ದಿತು. ಶಿವನನ್ನು ಹುಡುಕುತ್ತ ಬಂದ ಪಾರ್ವತಿಯು ಇಲ್ಲಿಯೇ ನಿಂತಳು. ಇಲ್ಲಿ ಶಿವನು ಬೇಡರ ವೇಷದಲ್ಲಿ, ಪಾರ್ವತಿಯು ಬೇಡತಿ ವೇಷದಲ್ಲಿ ಬಂದಿದ್ದರಿಂದ ಈ ಸ್ಥಳವನ್ನು ಕಾಮ್ಯಕ ವನವೆಂದು ಕರೆದರು. ಒಮ್ಮೆ ಪಾರ್ವತಿಗೆ ನೀರಡಿಕೆಯಾಗಲು, ಶಿವನು ತನ್ನ ತ್ರಿಶೂಲ ದಿಂದ ಭೂಮಿಯನ್ನು ಪ್ರಹಾರ ಮಾಡಲು ಪಾತಾಳದಿಂದ ನೀರು ಪುಟಿದೆದ್ದು ಬಂದಿತು. ಇದನ್ನೇ ಶಿವಾಲಯ ತೀರ್ಥವೆಂದು ಕರೆದಿರುವರು,

ಒಮ್ಮೆ ಶಿವ ಪಾರ್ವತಿಯರು ಕಾಮ್ಯಕ ವನದಲ್ಲಿ ಕ್ರೀಡಾಸಕ್ತರಾದ ಸಮಯದಲ್ಲಿ ಸುಧನ್ವನೆಂಬವನು ಬೇಟೆಯಾಡುತ್ತ ಅಲ್ಲಿಗೆ ಬರಲು, ಆತನು

ಅಲ್ಲಿ ಆಶ್ಚರ್ಯಕರವಾಗಿ ಸ್ತ್ರೀಯಾಗಿ ಮಾರ್ಪಟ್ಟನು. ನಂತರ ಅವನು (ಅವಳು) ಶಿವಾಲಯ ತೀರ್ಥಕ್ಷೇತ್ರದಲ್ಲಿ ತಪಸ್ಸು ಮಾಡಿದನು (ಳು) ಶಿವನು ಪ್ರತ್ಯಕ್ಷನಾಗಿ ಅವಳ ಪೂರ್ವಜನ್ಮದಲ್ಲಿ 'ಇಲಾ' ಎಂಬ ಸ್ತ್ರೀಯೇ ಆಗಿದ್ದರಿ ಈಗ ಅವನನ್ನು (ಅವಳನ್ನು) ಶಾಪಮುಕ್ತಳನ್ನಾಗಿ ಮಾಡಿ 'ಏಲಗಂಗಾ' ಳನ್ನಾಗಿ ಮಾಡಿದನು. ಈ ಏಲಗಂಗಾ ನದಿಯು ಕಾಮ್ಯಕವನದಲ್ಲಿ ಉಗಮಿಸಿ ಮುಂದೆ ಧಾರಾ ತೀರ್ಥವೆಂಬ ಹೆಸರು ಹೊಂದಿ ವೇಳೂರ ಗ್ರಾಮದ ಮುಂದೆ ಹರಿದು ಹೋಗಿರುವಳು.

ಪಾರ್ವತಿಯು ಒಮ್ಮೆ ಕುಂಕುಮ ಮತ್ತು ಕೇಶರ (ಘೃಸೃಣ)ಗಳ ಮಿಶ್ರಣ ಮಾಡಿ ತನ್ನ ಎಡಗೈ ಅಂಗೈಯಲ್ಲಿ ಹಿಡಿದು ಶಿವಾಲಯ ತೀರ್ಥದ ಜಲವನ್ನು ಹಾಕಿ ಬಲಗೈ ಆರಕ್ತ ಬೆರಳಿನಿಂದ ತಿಕ್ಕಲು, ಚಮತ್ಕಾರವೆಂಬಂತೆ ಅವಳ ಎಡಗೈಯಲ್ಲಿಯ ಕುಂಕುಮ ಕೇಶರಗಳಿಂದ ಶಿವಲಿಂಗ ನಿರ್ಮಾಣವಾಗಿ, ಆ ಲಿಂಗದಿಂದ ದಿವ್ಯಜ್ಯೋತಿಯೊಂದು ಪ್ರಕಟಗೊಂಡಿತು. ಆಗ ಶಿವನು ಪಾರ್ವತಿಯನ್ನು ಕುರಿತು, ಈ ಅಗಮ್ಯ ಲಿಂಗವು ಪಾತಾಳವಲ್ಲಿತ್ತು. ತ್ರಿಶೂಲ ತೆಗೆದುಕೊಂಡ ಕೂಡಲೆ ಈ ಭೂಮಂಡಲದಲ್ಲಿ ಜಲೆಯ ಸರೋವರ ವಾಗಿ ತಿರುಗಿ ಬಂದಿತು. ಎಂದು ಹೇಳಿದನು. ಪಾರ್ವತಿಯು ತನ್ನ ಹಸ್ತದಲ್ಲಿ ಪ್ರಕಟವಾದ ದಿವ್ಯಲಿಂಗವನ್ನು ಒಂದು ಪ್ರಶಸ್ತವಾದ ಲಿಂಗದಲ್ಲಿ ಹಿಡಿದಿಟ್ಟು, ಜಗತ್ತಿನ ಕಲ್ಯಾಣಕ್ಕಾಗಿಯೇ ಅಲ್ಲಿ ಪ್ರತಿಷ್ಠಾಪಿಸಿದಳು. ಆ ಪೂರ್ಣ ಜ್ಯೋತಿರ್ಲಿಂಗಕ್ಕೆ 'ಕುಂಕುಮೇಶ್ವರ' ನೆಂದು ಹೆಸರಿಟ್ಟಳು. ಆದರೆ ಘೃಸೃಣ (ಕೇಶರ) ದ ಘರ್ಷಣದಿಂದ ಹುಟ್ಟಿದ ಈ ಲಿಂಗವನ್ನು ಘೃಸೃಣೇಶ್ವರ (ಘೃಷ್ಣೇಶ್ವರ) ಎಂದೂ ಕರೆಯುವ ರೂಢಿಯಾಯಿತು.

ಮತ್ತೊಂದು ಕಥೆಯೂ ಹೀಗುಂಟು: ಹಿಂದಕ್ಕೆ ವೇಳೂರ ಗ್ರಾಮದಲ್ಲಿ ಸುಧರ್ಮನೆಂಬ ಗೃಹಸ್ಥನಿದ್ದನು. ಅವನಿಗೆ ಸುದೇಹಿ ಎಂಬ ಪತ್ನಿ. ಅವಳಿಗೆ ಬಹುದಿನಗಳಿಂದ ಮಕ್ಕಳಾಗದ್ದರಿಂದ ತನ್ನ ತಂಗಿಯಾದ ಘುಸೃಣ್ಯಳನ್ನು ತನ್ನ ಗಂಡನಿಗೆ ಎರಡನೆಯ ಪತ್ನಿಯನ್ನಾಗಿ ತಂದಳು. ಘುಸೃಣೆ ಒಳ್ಳೇ ಶಿವಭಕ್ತಳು. ಅವಳು ಪ್ರತಿದಿನ ಮಣ್ಣಿನ ೧೦೧ ಲಿಂಗಗಳನ್ನು ಮಾಡಿ, ಅವನ್ನು ಪೂಜಿಸಿ ನಂತರ ಆ ಪಾರ್ಥಿವ ಲಿಂಗಗಳನ್ನು ಅಲ್ಲಿಯ ಸರೋವರದಲ್ಲಿ ವಿಸರ್ಜಿಸುತ್ತಿದ್ದಳು. ಶಿವನ ಅನುಗ್ರಹದಿಂದ ಅವಳಿಗೆ ಒಂದು ಗಂಡು ಮಗು ಹುಟ್ಟಿತು.ಇದು ಅವಳ ಅಕ್ಕ ಸುದೇಹಿಗೆ ಸಹಿಸಲಾಗಲಿಲ್ಲ. ಸವತಿ ಮಾತ್ಸರ್ಯ ಹೆಡೆಯಾಡಿತು. ಆ ಮಗುವನ್ನು ಕೊಂದು ಸರೋವರದಲ್ಲಿ ಎಸೆದಳು. ಮರುದಿನ ಯಥಾಪ್ರಕಾರ ಘುಸೃಣಾಳು ಲಿಂಗ ಪೂಜೆಯನ್ನು ಮಾಡಿ ಸರೋವರದಲ್ಲಿ ವಿಸರ್ಜಿಸಲು ಹೋದಾಗ ತನ್ನ ಮಗನ ಶವ ಸರೋವರದಲ್ಲಿ ತೇಲುತ್ತಿರುವುದನ್ನು ಕಂಡು ಭಯ ಭೀತಳಾದಳು. ಆಗ ಶಿವನು ಪ್ರತ್ಯಕ್ಷನಾಗಿ ಆ ಮಗುವನ್ನು ಬದುಕಿಸಿಕೊಟ್ಟು, ಅವಳ ಭಕ್ತಿಗೆ ಮೆಚ್ಚಿ, ದಿವ್ಯ ಜ್ಯೋತಿರ್ಲಿಂಗ ರೂಪ ತಾಳಿ ಅಲ್ಲಿ ಶಾಶ್ವತವಾಗಿ ನಿಂತುಬಿಟ್ಟನು. ಸುದೇಹಿಯನ್ನು ಶಿಕ್ಷಿಸಲು ತಯಾರಾದ ಶಿವನನ್ನು, ಘುಸೃಣಾಳೇ ಅಂಗಲಾಚಿ ಬೇಡಿಕೊಂಡು ಅವಳನ್ನು ಕ್ಷಮಿಸೆಂದು ಬೇಡಿಕೊಂಡಳು, ಶಿವಭಕ್ತಳಾದ ಘುಸೃಣಾಳ ನೆನಪಿಗಾಗಿ ಶಿವನು ಇಲ್ಲಿ ಘುಸೃಣೇಶನಾಗಿರುವನು.

"ಘೃಷ್ಣೇಶಾಖ್ಯಾಯಮಿದಂ ಲಿಂಗಮಿಥ್ಯಂ ಜಾತಂ ಮುನಿರೀಶ್ವರಾ:
ತದೃಷ್ಟ್ವಾ ಪೂಜಯಿತ್ವಾಹಿ ಸುಖಂ ಸಂವರ್ಧತೆ ಸದಾ" ॥

(ಎಲೈ ಮುನಿಗಳೇ ಈ ಘೃಷ್ಣೇಶ್ವರ ಲಿಂಗವನ್ನು ಅವಲೋಕಿಸುವುದರಿಂದ ಹಾಗೂ ಅರ್ಚಿಸುವುದರಿಂದ ಸಂಪೂರ್ಣ ಸುಖವರ್ಧಿಸುವುದು)

**ಐತಿಹಾಸಿಕ ಹಿನ್ನೆಲೆ :**

ಇದೊಂದು ಭವ್ಯ ದಿವ್ಯ ಮಂದಿರ. ರಾಷ್ಟ್ರಕೂಟರ ಆಳಿಕೆಯಲ್ಲಿ ದಂತಿ ದುರ್ಗನ ಅಪೇಕ್ಷೆಯ ಮೇರೆಗೆ ಆತನ ಕಕ್ಕನ ಮಗ ಕೃಷ್ಣರಾಜನು ಈ ಮಂದಿರವನ್ನು ಕಟ್ಟಿಸಿದನೆಂದು ಹೇಳುವರು. ಇದೊಂದು ವಾಸ್ತು ಶಿಲ್ಪಕಲಾ ಶ್ರೇಷ್ಠತೆಯ ಹೆಗ್ಗುರುತು.

ಮಾಲೋಜಿ ಭೋಸಲೆ ಎಂಬ ಶಿವಭಕ್ತ ವೇಳೂರ ಗೌಡ. ಘೃಷ್ಣೇಶ್ವರನ ಕೃಪೆಯಿಂದ ಈ ಗೌಡನಿಗೆ ದ್ರವ್ಯ ತುಂಬಿದ ದೊಡ್ಡ ಹಂಡೆಯೊಂದು ಸಿಕ್ಕಿತಂತೆ. ಆ ಧನದಿಂದ ಆತನು ಮಂದಿರವನ್ನು ಜೀರ್ಣೋದ್ಧಾರ ಮಾಡಿಸಿದನಲ್ಲದೆ ಶಿಖಣಿಸಿಂಗಾರಪೂರ ಎಂಬ ಕೆರೆಯೊಂದನ್ನು ಕಟ್ಟಿಸಿದನಂತೆ. ನಂತರ ಭೋಸಲೆ ಮನೆತನದಲ್ಲಿಯೇ ಪ್ರತ್ಯಕ್ಷ ಶಿವನೇ ಅವತರಿಸಿ ಆ ವಂಶವನ್ನು ಉದ್ಧರಿಸಿದನೆಂದು ಪ್ರತೀತಿ.

ಗೌತಮಿ ಬಾಯಿ ಮತ್ತು ಅಹಲ್ಯಾಬಾಯಿ ಹೋಳಕರ ಅವರು ಈ ಮಂದಿರದ ಜೀರ್ಣೋದ್ಧಾರವನ್ನು ಮಾಡಿಸಿದ್ದಲ್ಲದೆ, ಮಂದಿರದ ಎತ್ತರದ ಕಟ್ಟಡದ ಅರ್ಧಭಾಗವನ್ನು ಕೆಂಪು ಕಲ್ಲುಗಳಿಂದ ಕಟ್ಟಿಸಿದರಂತೆ. ಮೇಲ್ಭಾಗದಲ್ಲೆಲ್ಲ ದಶಾವತಾರದ ಮತ್ತು ಅನೇಕ ದೇವತೆಗಳ ಮೂರ್ತಿಗಳನ್ನು ಸ್ಫುಟವಾಗಿ ಕೆತ್ತಿರುವರು.

ಲಕ್ಷವಿನಾಯಕನ ೨೧ ಪೀಠಗಳಲ್ಲಿ ಇದೂ ಒಂದು ಪೀಠಸ್ಥಾನ. ಆ ಪ್ರಯುಕ್ತ ಮೊದಲು ಗಣಪತಿಯ ದರ್ಶನ ಮಾಡಿಕೊಂಡೇ ಶಿವಲಿಂಗ ದರ್ಶನ ಮಾಡುವ ಪರಿಪಾಠ ಉಂಟು.

ಈ ಮಂದಿರದಲ್ಲಿ ಜ್ಯೋತಿರ್ಲಿಂಗ ಪೂರ್ವಾಭಿಮುಖ.

ದೇವಸ್ಥಾನಕ್ಕೆ ವ್ಯವಸ್ಥಾಪಕ ಮಂಡಳಿಯಿದ್ದು ಸಕಲ ಕಾರ್ಯಗಳನ್ನು ಸುವ್ಯವಸ್ಥಿತವಾಗಿ ನಡೆಯಿಸಿಕೊಂಡು ಹೋಗುವುದು. ದಿನನಿತ್ಯ ಎರಡು ಸಮಯ ನಗಾರಿಯ ಧ್ವನಿ ಮಾಧುರ್ಯದಿಂದ ಪೂಜೆ, ಆರತಿ ಜರುಗುವವು. ದೇವರ ದರ್ಶನ ಪಡೆಯುವವರು ಗರ್ಭಗುಡಿಯು ಬರುವದಕ್ಕಿಂತಲೂ ಮೊದಲೇ ಪ್ಯಾಂಟು, ಶರ್ಟಗಳು ಇರಕೂಡದು. ಸೋಮವಾರ, ಪ್ರದೋಷ, ಶಿವರಾತ್ರಿ ಈ ದಿನಗಳಲ್ಲಿ ಭಕ್ತರ ದಟ್ಟಣೆ ಬಹಳ. ನಿತ್ಯ ದಟ್ಟಣೆಯೂ ಉಂಟು.

ಶ್ರೀ ಘೃಷ್ಣೇಶ್ವರನನ್ನು ಪದ್ಯದಲ್ಲಿ ನೆನೆದಿರುವೆ

# ಶ್ರೀ ಘೃಷ್ಣೇಶ್ವರ

ಕುಂಕುಮ ಕೇಶರ ಮಿಶ್ರಣ ಮಾಡುತ
ಅಂಗೈ ತಳದಲಿ ಹಿಡಿಯುತ ಪಾರ್ವತಿ
ಶಂಕರನೆನ್ನುತ ಜಲಸಿಂಪಡಿಸಲು
ರಂಗವು ಮೂತ್ತಿತು ಗೌರಿಯ ವದನಕೆ ॥೧॥

ನಿರ್ಮಿತ ಗೋಳುತಲಿ ಈಶ್ವರ ಲಿಂಗವು
ಧರ್ಮದ ಜ್ಯೋತಿಯ ಆತ್ಮಾನಂದದ
ಮರ್ಮವ ತಿಳಿಸಲು ಪ್ರಕಟಣೆಗೊಂಡಿತು
ನಿರ್ಮಲ ಚಿತ್ತದ ಶಿವಲಿಂಗೆಂಬುದು ॥೨॥

ಘರ್ಷಣೆಯಿಂದಲಿ ಪುಟ್ಟಿದ ಲಿಂಗಕೆ
ಘೃಷ್ಣೇಶನ್ನುತ ಪಾರ್ವತಿ ಕರೆದಳು
ಹರ್ಷವ ಪಡುತಲಿ ಶಂಕರನೆದುರಲಿ
ದರ್ಶನ ತೋರಿದ ಲಿಂಗವ ನೆನೆಯುತ ॥೩॥

ಮುನಿಗಳೆ ಯತಿಗಳೆ ಋಷಿಗಳೆ ಕೇಳಿರಿ
ಜನಗಳೆ ಭಕ್ತರೆ ಮತ್ತಾಸಕ್ತರೆ
ಮನವನು ಕೊಡುತಲಿ ಯರ್ಚಿಸಿ ಲಿಂಗವ
ಜನಿಸುತಲಿರುವವು ಸುಖಸಂತಸಗಳು ॥೪॥

ಆಧಾರ :

೧) ಪುರಾಣಗಳು.
೨) ಸ್ವಯಂ ಕ್ಷೇತ್ರ ಸಂದರ್ಶನದಿಂದ ದೊರಕಿಸಿದ ಮಾಹಿತಿ.
೩) ಇತಿಹಾಸ.

—ಮುಕ್ತಾಯ—

# ಅಭಿಪ್ರಾಯ

ಈಶಾವಾಸ್ಯಮಿದಂ ಸರ್ವಂ

ಯತ್ಕಿಂಚ ಜಗತ್ಯಾಂ ಜಗತ್

ಎಂದು ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದ ಪ್ರಕಾರ ಈ ಜಗತ್ತಿನಲ್ಲಿರುವುದೆಲ್ಲವೂ ಈಶ್ವರನ ಅಸ್ತಿತ್ವದಿಂದ ಶಿವ ಪರಮಾತ್ಮ ಅಣುರೇಣು ತೃಣಕಾಷ್ಟಗಳಲ್ಲಿ ವ್ಯಾಪಿಸಿದ್ದಾನೆ.

ಈಶ್ವರನು ವಿಶ್ವರೂಪಿ, ವಿಶ್ವವ್ಯಾಪಿ ಅಷ್ಟೇ ಅಲ್ಲ ಅವನು ವಿಶ್ವೇಶ. ಸೃಷ್ಟಿ-ಸ್ಥಿತಿ-ಲಯ ತತ್ವಗಳ ಮೂರ್ತಿಮಂತ ಸ್ವರೂಪನು.

ಶಿವ ತತ್ವವು ವಿಶ್ವವ್ಯಾಪಿಯಾಗಿದೆ. ಮಂಗಳಕಾರಿ ಎನಿಸಿದೆ. ಶಿವಂ ಭದ್ರಂ ಕಲ್ಯಾಣಂ ಎಂದೇ ಹೇಳಲಾಗುತ್ತಿದೆ. ಋಷಿ, ಮುನಿ ಹಾಗೂ ತಪಸ್ವಿಗಳು ಸತ್ಯಂ ಶಿವಂ ಸುಂದರಂ ಎಂದು ಅವನನ್ನು ಹೊಗಳಿ ಹಾಡಿದ್ದಾರೆ.

ಲಿಂಗ ಶಬ್ದದ ವ್ಯಾಖ್ಯೆಯನ್ನು ಸುಪ್ರಭೇದಾಗಮದಲ್ಲಿ—

" ಲಯಂ ಗಚ್ಛಂತಿ ಭೂತಾನಿ
ಸಂಹಾರೀ ನಿಖಿಲಂ ಯತಃ
ಸೃಷ್ಟಿಕಾಲೇ ಪುನಃ ಸೃಷ್ಟಿಂ
ತಸ್ಮಾತ್ ಲಿಂಗಂ ಉದಾಹೃತಂ"

ಪ್ರಳಯಕಾಲದಲ್ಲಿ, ಈ ಜಗತ್ತಿನಲ್ಲಿ ಎಲ್ಲವೂ ಲಿಂಗದಲ್ಲಿ ಲಯವಾಗುತ್ತದೆ ಮತ್ತು ಸೃಷ್ಟಿಕಾಲದಲ್ಲಿ ಅದೇ ಆಕಾರದಲ್ಲಿ ಹುಟ್ಟಿ ಬರುತ್ತದೆ. ಆದ್ದರಿಂದ ಇದಕ್ಕೆ ಲಿಂಗ ಎಂದು ಹೆಸರು.

ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಕರುಣಾಮಯಿ ಮೂರ್ತಿ-ಯಾದ ಶಿವಪರಮಾತ್ಮನು ಅನಂತ ಶಕ್ತಿಯ ದ್ಯೋತಕವಾಗಿ ಲಿಂಗರೂಪದಲ್ಲಿ ಕಾಣಿಸಿಕೊಂಡಿದ್ದಾನೆ.

ಶಿವನನ್ನೇ ಜಗತ್ತೆಲ್ಲವೂ ಆಧಾರವಾಗಿ ಮಾಡಿಕೊಂಡಿದೆಯಾದ್ದರಿಂದ ( ಶೇತೆ ಅಸ್ಮಿನ್ ಇತಿ ಶಿವಃ ) ಈತನಿಗೆ ಶಿವನೆಂದು ಹೆಸರು. ಲೋಕ ಹಿತ-ವನ್ನು ಬಯಸುವವನಾದ್ದರಿಂದ ಶಿವನು ( ವೃಷ್ಟೀತಿ ಶಿವಃ. ) ಶಿವನ ಪ್ರತ್ಯಕ್ಷರೂಪದ ವರ್ಣನೆ ಭಯಂಕರವೂ, ಭಯಾನಕವೂ ಆಗಿರುವಂತೆ ಮೋಹಕವೂ ಆಕರ್ಷಕವೂ ಆಗಿದೆ.

ಶಿವ ಎಂದರೆ ಮಂಗಳವೆಂದೇ ಅರ್ಥ. ಅಮರಕೋಶದಲ್ಲಿ "ಶ್ರೇಯಸಂ, ಶಿವಂ, ಭದ್ರಂ, ಕಲ್ಯಾಣಂ ಮಂಗಳಂ ಶಂಭಂ" ಎಂದು ಶಿವ ಶಬ್ದಕ್ಕೆ ಪರ್ಯಾಯವಾಗಿ ಉಳಿದ ಶಬ್ದ ಕೊಟ್ಟಿದ್ದಾರೆ. ಶಂ ಕರೋತಿ ಇತಿ ಶಂಕರಃ ಎಂದೂ ಹೇಳುತ್ತಾರೆ.

ಇಂತಹ ಕಲ್ಯಾಣಕಾರಿಯಾದ ಅದ್ಭುತ ಹಾಗೂ ಅಗಾಧ ಮಹಿಮೆ-ಯುಳ್ಳ ಶಿವನ ಹನ್ನೆರಡು ಜ್ಯೋತಿರ್ಲಿಂಗ ರೂಪಗಳನ್ನು ಆಳವಾಗಿ ಅಭ್ಯಾಸ ಮಾಡಿ ಲೇಖಕರು ಈ ಹೊತ್ತಿಗೆ ಹೊರತಂದಿದ್ದಾರೆ.

ಈ ಹನ್ನೆರಡು ಜ್ಯೋತಿರ್ಲಿಂಗಗಳ— ವೈಜ್ಞಾನಿಕ, ಭೌಗೋಲಿಕ, ಐತಿಹಾಸಿಕ, ಧಾರ್ಮಿಕ, ಪೌರಾಣಿಕ ಹಾಗೂ ಸಾಂಪ್ರದಾಯಿಕ ಹಿನ್ನೆಲೆಯನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

ನಮ್ಮ ಭಾರತ ದೇಶವಲ್ಲಿ ಉತ್ತರದಲ್ಲಿಯ ಹಿಮಾಲಯ ಶ್ರೇಣಿಯಲ್ಲಿ ಇರುವ ಕೇದಾರನಾಥದಿಂದ ದಕ್ಷಿಣದ ರಾಮೇಶ್ವರದ ವರೆಗೆ ಅಲ್ಲಲ್ಲಿ ನಾವು ಈ ಜ್ಯೋತಿರ್ಲಿಂಗಗಳನ್ನು ಕಾಣಬಹುದು.

ವಿಜ್ಞಾನಿಗಳ ಅಭಿಪ್ರಾಯದಲ್ಲಿ ಈ ಜ್ಯೋತಿರ್ಲಿಂಗಗಳು ಸುಪ್ತಾವಸ್ಥೆಯಲ್ಲಿರುವ ಜ್ವಾಲಾಮುಖಿಯ ಉದ್ರೇಕ ಸ್ಥಾನಗಳೆಂದು ಸ್ಪಷ್ಟಪಡಿಸಿದ್ದಾರೆ.

ಈ ಜ್ಯೋತಿರ್ಲಿಂಗಗಳು ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಕರುಣಾಮಯಿ ಮೂರ್ತಿಯಾದ ಶಿವ ಪರಮಾತ್ಮನ ಅನಂತ ಶಕ್ತಿಯ ದ್ಯೋತಕಗಳಾಗಿವೆ.

ಇವು ಅದ್ಭುತ ಹಾಗೂ ಅಗಾಧ ಮಹಿಮೆಯುಳ್ಳವು

ಶಿವನು ನಿರಹಂಕಾರಿಯೂ ಅಹುದು ನಿರಂಕುಶನೂ ಅಹುದು, ಭಕ್ತಾಧೀನನು ಅಹುದು, ಸುರರೇ ಇರಲಿ, ಅಸುರರೇ ಇರಲಿ ಅವರ ಭಕ್ತಿಗೆ ಮೆಚ್ಚಿ ವರಕೊಡುತ್ತಾನೆ. ಆ ವರವನ್ನು ಸದುಪಯೋಗ ಮಾಡಿಕೊಂಡು ಸತ್ಕಾರ್ಯ ಮಾಡಿದವರಿಗೆ ಕಲ್ಯಾಣವಾಗಿದೆ. ದುರುಪಯೋಗ ಮಾಡಿ ಕೊಂಡು ದುಷ್ಕೃತ್ಯ ಮಾಡಿದವರು ದುರ್ಧರ ಸಂಕಟಕೊಳಗಾಗಿದ್ದಾರೆ.

ಈ ಜ್ಯೋತಿರ್ಲಿಂಗಗಳಿರುವ ಸ್ಥಾನಗಳು— ಭಕ್ತರು ಹಾಗೂ ಋಷಿ ಮುನಿಗಳು ಉಗ್ರ ತಪಸ್ಸನ್ನಾಚರಿಸಿ ಶಿವಪರಮಾತ್ಮನ ಮೆಚ್ಚಿಗೆಗೆ ಪಾತ್ರರಾಗಿ ಅವನ ಭವ್ಯ ಹಾಗೂ ದಿವ್ಯಮಯ ದರ್ಶನ ಪಡೆದ ತಾಣಗಳಾಗಿವೆ.

ಸೋಮನ ( ಚಂದ್ರನ ) ಉಗ್ರ ತಪಸ್ಸಿಗೊಲಿದು, ಅವನಿಗೊದಗಿದ ವಿಪತ್ತನ್ನು ದೂರಮಾಡಿ (ಶಾಪ ವಿಮೋಚನೆ ಮಾಡಿ) ಸೋಮನ ಪ್ರಾರ್ಥನೆ ಯಂತೆ ಶಿವನು ಜ್ಯೋತಿರ್ಲಿಂಗವಾಗಿ ನಿಂತ ತಾಣವೇ ಇಂದು ಸೋಮನಾಥ ವಾಗಿದೆ,

ಅರ್ಜುನನು ಶ್ರೀಶೈಲ ಪರ್ವತದಲ್ಲಿ ಮಲ್ಲಿಗೆ ಹೂಗಳಿಂದ ಶಿವನನ್ನು ಪೂಜೆಮಾಡಿ ಒಲಿಸಿಕೊಂಡಸ್ಥಳವೇ ಶ್ರೀಶೈಲ ಮಲ್ಲಿಕಾರ್ಜುನ ಜ್ಯೋತಿರ್ಲಿಂಗ.

ಹೀಗೆ ಹನ್ನೆರಡು ಜ್ಯೋತಿರ್ಲಿಂಗಗಳ ಕಥೆಗಳು ವೈವಿಧ್ಯಮಯವಾಗಿ ಸುಂದರವಾಗಿ ಚಿತ್ರಿಸಲ್ಪಟ್ಟಿವೆ. ಅವನ್ನೆಲ್ಲ ಲೇಖಕರು ಸಂಪಾದಿಸಿ ಸಂಕಲನ ಮಾಡಿ ಓದುಗರ ಮನ ಮುಟ್ಟುವಂತೆ ಮನಮೆಚ್ಚುವಂತೆ ತಮ್ಮದೇ ಸಾಹಿತ್ಯಿಕ ಶೈಲಿಯಲ್ಲಿ ಬರೆದಿದ್ದಾರೆ,

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೀರ್ತಿಗಳಿಸಿದ ದಿ. ಕೇಶವ ಶರ್ಮಾ ಗಲಗಲಿಯವರ ಪುತ್ರರಾದ, ಮತ್ತು ಕನ್ನಡ ಸಾಹಿತ್ಯ ರಂಗದಲ್ಲಿ ಆಳವಾಗಿ ಅಭ್ಯಸಿಸಿದ್ದ ದಿ. H. G. ಜೋಶಿಯವರ ಸಹೋದರರಾದ ಶ್ರೀ N. K. ಜೋಶಿಯವರೂ ಕೂಡ ವಂಶಪಾರಂಪರವಾಗಿ ಬಂದ ಸಾಹಿತ್ಯಕ್ಷೇತ್ರದಲ್ಲಿ ಒಳ್ಳೇ ಕೃಷಿಮಾಡಿ ಮುನ್ನಡೆದು ಸಾಹಿತ್ಯರಂಗಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.

ಈ ಹೊತ್ತಿಗೆಯಲ್ಲಿ, ಅಲ್ಲಲ್ಲಿ, ಪ್ರತಿಯೊಂದು ಜ್ಯೋತಿರ್ಲಿಂಗದ ಮಹಿಮೆ ಮತ್ತು ವರ್ಣನೆಯನ್ನು ಚೌಪದಿ ಹಾಗೂ ಷಟ್ಪದಿ ಕವನಗಳಲ್ಲಿ ರಚಿಸಿ ಓದುಗರ ಮನ ತಣಿಸಿದ್ದಾರೆ.

ಹನ್ನೆರಡು ಜ್ಯೋತಿರ್ಲಿಂಗಗಳ ಮಹಿಮೆಯನ್ನು ನಮಗೆ ಪರಿಚಯ ಮಾಡಿಕೊಟ್ಟ ಶ್ರೀ N. K. ಜೋಶಿಯವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ. ಅವರಿಗೆ ಶಿವಂ ಶುಭಂ ಕರೋತು.

ಇತಿ

ವಾಯ್. ಎಸ್. ಪಾಟೀಲ,
ಬಿ. ಎ. ಎಲ್ ಎಲ್. ಬಿ.
ಮಾಜಿ ವಿಧಾನ ಪರಿಷತ್ತಿನ
ಸದಸ್ಯರು.

ಶ್ರೀ ಶಕ್ತಿ
ರಾಮನಗರ ಲೈನಬಜಾರ
ಧಾರವಾಡ ೫೮೦೦೦೧
೧೫-೧೨-೧೯೯೯

## -ಅಭಿಪ್ರಾಯ-

ಭಾರತದ ಆಸಕ್ತ ಪರಂಪರೆಯಲ್ಲಿ ಜ
ಮಹತ್ತರ ಮತ್ತು ವಿಶಿಷ್ಟಸ್ಥಾನವಿದೆ. ದೇಶದ
ವನ್ನು, ಭಾವೈಕ್ಯವನ್ನು, ಉಳಿಸಿ ಬೆಳಿಸಿಕೊಂ
ಪಾತ್ರ ಮಹತ್ವದ್ದು. 'ಆಸೇತು ಹಿಮಾಚಲ'
ಎಂಬ ಪದಗಳ ಪ್ರಯೋಗವೇ ನಮ್ಮ ಪ್ರಾ
ಹರವನ್ನು ತೋರಿಸುತ್ತದೆ. ಧಾರ್ಮಿಕ ಬುದ್ಧಿ
ಮಂಡೂಕನಂತಾಗಬಾರದು. ದೇಶವನ್ನು ಸು
ಸ್ವಭಾವ, ಭಾಷೆ, ಇರುವಿಕೆ ಮುಂತಾದವುಗಳ
ಬೇಕೆಂದು ಅವರು ಅಪೇಕ್ಷಿಸುತ್ತಿದ್ದರು. ಆದ್ದರಿಂ
ಗಳನ್ನು ಧರ್ಮಸಾಧನೆಯ ಅಂಗವಾಗಿ ಸೇರಿ
ಗಳನ್ನು ದೇಶದ ನಾಲ್ಕು ನಿಟ್ಟುಗಳಲ್ಲಿ ನೆಲೆಗೊಳಿಸಿ
ಪರಿಚಯ ಮತ್ತು ಬಳಕೆಗಳು ಬೆಳೆಯುವಂತೆ
ಸಾಗರವನ್ನು ಸಫಲವಾಗಿ ಈಸಿಯೇ ಪರಮಾರ್ಥ
ಸೋಪಾನಗಳನ್ನು ವಿಧಿಸಿದರು.

ದ್ವಾದಶ ಜ್ಯೋತಿರ್ಲಿಂಗಗಳ ಯಾತ್ರೆಯ

